


# ಹಿಂಗಾರ

## ಅರೆಬಾಸೆ ತ್ರೈಮಾಸಿಕ



ಸಂಪುಟ : 4 ಸಂಚಿಕೆ : 6 ದಿನಾಂಕ : 30-06-2021 ಬೆಲೆ : ರೂ. 20

ಎಪ್ರಿಲ್-ಮೇ-ಜೂನ್ 2021

75 ಸ್ವಾತಂತ್ರ್ಯದ ಅಮೃತ ಮಹೋತ್ಸವ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ದಶ ವರ್ಷ ಸಂಭ್ರಮ

2011-2021

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

# ಅರೆಭಾಷೆ ಸಂಸ್ಕೃತಿ-ಪ್ರಕೃತಿ ಚಿತ್ರಕಲಾ ಶಿಬಿರಲಿ ಅನಾವರಣ ಆದ ಚಿತ್ರಗ





















## ಹಿಂಗಾರ ತ್ರೈಮಾಸಿಕ





ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

# ಹಿಂಗಾರ

## ಅರೆಭಾಷೆ ತ್ರೈಮಾಸಿಕ

ಸಂಪುಟ : 4 ಸಂಚಿಕೆ : 6

ದಿನಾಂಕ : 30–06–2021 ಕೊಡಗು ರೂ. 20

ಪ್ರಧಾನ ಸಂಪಾದಕರ್
**ಲಕ್ಷ್ಮೀನಾರಾಯಣ ಕಜೆಗದ್ದೆ**

ಸಂಪಾದಕರ್
**ಡಾ. ದಯಾನಂದ ಕೂಡಕಂಡಿ**

ಸಹಸಂಪಾದಕರ್
**ಪುರುಷೋತ್ತಮ ಕಿರ್ಲಾಯ**

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka Arebhase Samskruthi Mathu Sahitya Academy** | **ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ** |
| Coffee Krip, 1st Floor | ಕಾಫಿ ಕೃಪಾ, ಒಂದನೇ ಮಹಡಿ, |
| Rajaseat Rd, Madikeri - 571 201 | ರಾಜಸೀಟ್ ರಸ್ತೆ, ಮಡಿಕೇರಿ–571201 |
| Ph : 08272-223055 | ದೂರವಾಣಿ : 08272–223055 |
| arebaseacademy@gmail.ocm | arebaseacademy@gmail.ocm |
| www.arebaseacademy.com | www.arebaseacademy.com |
| Chief Editor | ಪ್ರಧಾನ ಸಂಪಾದಕರ್ |
| **Lakshminarayana Kajegadhe** | **ಲಕ್ಷ್ಮೀನಾರಾಯಣ ಕಜೆಗದ್ದೆ** |
| Editor | ಸಂಪಾದಕರ್ |
| **Dr. Dayananda Kudakandi** | **ಡಾ. ದಯಾನಂದ ಕೂಡಕಂಡಿ** |
| Managing Editor | ವ್ಯವಸ್ಥಾಪಕ ಸಂಪಾದಕರ್ |
| **Chinnaswamy** | **ಚಿನ್ನಸ್ವಾಮಿ** |
| Cover Page Photo | ಮುಖಪುಟ ಚಿತ್ರ |
| **Thekkade Kumarswamy** | **ತೆಕ್ಕಡೆ ಕುಮಾರಸ್ವಾಮಿ** |
| Printed at | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Ph. 0824-2972002 | ದೂರವಾಣಿ : 0824–2972002 |
| Pages : 80 | ಪುಟಗಳು : 80 |
| Copis : 1800 | ಪ್ರತಿಗಳು : 1800 |
| Vol : 4 - 6 | ಸಂಪುಟ 4 ಸಂಚಿಕೆ 6 |
| Period : April to June | ಎಪ್ರಿಲ್ – ಜೂನ್ |
| Price : Rs. 20 | ಬೆಲೆ : ರೂ. 20/– |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. 200 |



# ಅಧ್ಯಕ್ಷರ ಮಾತ್

ಎಲ್ಲವುಕೆ ನಮಸ್ಕಾರ

ನಮ್ಮ ಅಕಾಡೆಮಿಯ ಧ್ಯೇಯ, ಉದ್ದೇಸನ ನೆಂಪುಲಿ ಇಸಿಕಂಡ್ ಆದಷ್ಟ್ ಮಟ್ಟಿಗೆ ಆ ದಿಕ್ಕಿ ಕಾರ್ಯಕ್ರಮನ ರೂಪಿಸುವ ಪ್ರಯತ್ನ ಮಾಡ್‌ತಾ ಒಳೋ. ಈ ಕೊರೋನಾ ಕಾಲಲಿ, ನಿಯಮ ಪಾಲಿಸಿಕಂಡ್ ಸಣ್ಣ ಮಟ್ಟಲಿ ಸಭೆ ಗೌಜಿ ಗದ್ದಲ ಇಲ್ಲದೆ ಕಾರ್ಯಕ್ರಮ ಮಾಡುವ ಅನಿವಾರ್ಯತೆ ನಾವುಗೆ ಇತ್ತ್. ಅದ್‌ಕೆನೆ ನಾವು ಏಪ್ರಿಲ್ ತಿಂಗಲಿ ಚಿತ್ರಕಲಾ ಶಿಬಿರ ಹಮ್ಮಿಕೊಂಡೋ. ರಾಜ್ಯದ ಬೇರೆ ಬೇರೆ ಕಡೆಗಳಂದ ಕಲಾವಿದರ್‌ನ ಕರೆಸಿಕಂಡೋ. ನಮ್ಮ ಅರೆಬಾಸಿಕರ ಮನೆಗಳಲ್ಲಿ ಉಳ್ದು, ಅವರ ಆತಿಥ್ಯ ಸ್ವೀಕರಿಸಿ, ಅರೆಬಾಸೆ ಸಂಸ್ಕೃತಿನ ತಿಳ್ಕಂಡ್ ಅದನ್ನ ಗೆರೆಗಳ ಮೂಲಕ ತೋರಿಸಿದೊ. ಇದ್ ಒಂದು ರೀತೀಲಿ ನಮ್ಮ ಪರಿಸರದ ಮಟ್ಟಿಗೆ ಹೊಸ ಪ್ರಯೋಗ. ಕಲೆ ಮೂಲಕ ಬಾಸೆ, ಸಂಸ್ಕೃತಿ ಗಡಿ ದಾಟುದು ತೇಳಿರೆ ಹಿಂಗೆ. ಹೊರೆಗೆಂದ ಬಂದ ಕಲಾವಿದರ್ ನಮ್ಮ ಸಂಸ್ಕೃತಿನ ಒಂದಸ್ಟ್ ಮಟ್ಟಿಗೆ ಅವರ ಊರಿಗೆ ತಕಂಡ್ ಹೋದವೆ, ಅರೆಬಾಸೆನ ಪೆರ್ಮೆಳ ಅಲ್ಲಿಗೂ ಹೋದೆ. ಅದರೊಟ್ಟಿಗೆ ಇದರ ಮುಖ್ಯ ಉದ್ದೇಸ ಈ ಚಿತ್ರಕಲೆನ ನೋಡಿ ನಮ್ಮ ಮಕ್ಕ ಪ್ರೇರಣೆ ಪಡ್ದರೆ ಅದರ್‌ಂದ ದೊಡ್ಡ ಕುಸಿ ಬೇರೆ ಇಲ್ಲೆ. ಮಡಿಕೇರಿ ವಿದ್ಯಾಭವನಲಿ ಈ ಚಿತ್ರಕಲೆನ ಪ್ರದರ್ಶನ ಇಟ್ಟಿದ್ದೊ. ಅದರ ನೋಡಿಕೆ ಬಂದವ್ಕೆ ನಿಜಕ್ಕೂ ಆಶ್ಚರ್ಯ. ನಮ್ಮ ಆಚಾರ ವಿಚಾರ, ಜೀವನ ಪದ್ಧತಿನ ಈ ರೀತಿಲಿ ಕೂಡ ಬೇರೆಯವ್ಕೆ ಪರಿಚಯಿಸಿಕೆ ಆದೆ ತೇಳಿ ಕುಸಿ ಪಟ್ಟೊ. ಇದೊಂದು

ರೀತಿಯ ಶಾಶ್ವತ ದಾಖಲೆ ಕೂಡ ಆದೇ ತೇಳ್‌ವಂತದ್ ನಮ್ಮ ಅನಿಸಿಕೆ.

ನಮ್ಮ ಆಚಾರ, ವಿಚಾರ, ಸಂಸ್ಕೃತಿ, ಪದ್ದತಿಗಳ ಈಗನೊವ್ಕೆ ತಿಳ್ಸಿ ಕೊಡುಕುತೇಳಿ ಸಂಪನ್ಮೂಲ ವ್ಯಕ್ತಿಗಳ್‌ಂದ ಸಾಂಸ್ಕೃತಿಕ ಶಿಬಿರಗಳ ಸುರು ಮಾಡ್ದೊ. ಸುರುನ ಶಿಬಿರ ಮಡಿಕೇರಿಲಿ ಬಾರೀ ಲ್ಯಾಯ್ಕ್‌ಲಿ ನಡ್ತ್. ಐಗೂರ್‌ಲಿ ನಡ್ದ ಎರಡ್ನೆ ಶಿಬಿರಲಿ ಸೋಬಾನೆ ಸೇರ್ದಂಗೆ ಅದೆಷ್ಟೋ ಆಚಾರ ವಿಚಾರಗ ಅಲ್ಲಿ ಮರುಜೀವ ಪಡ್‌ದೊ. ಒಟ್ಟುಲಿ ಅದೊಂದು ಯಶಸ್ವಿ ಶಿಬಿರ ಆತ್. ಅರೆಬಾಸಿಗರಿಗೆ ನಮ್ಮ ಸಂಸ್ಕೃತಿ ಬಗ್ಗೆ ಒಲವು ಉಟ್ಟು, ಅದರ ಮಕ್ಕಳಿಗೆ ಕಲಿಸೋಕು ತೇಳುವ ಆಸೆ ಕೂಡಾ ಉಟ್ಟು. ನಮ್ಮ ಅರೆಬಾಸೆ ಸಂಸ್ಕೃತಿ ಮುಂದಿನ ತಲೆಮಾರಿಗೂ ಉಳಿಯೋಕು ತೇಳ್ದು ಅಕಾಡೆಮಿಯ ಈ ಶಿಬಿರದ ಹಿಂದಿನ ಉದ್ದೇಶ. ಹಂಗೆನೆ ಇಂತ ಸಂಸ್ಕೃತಿ ಶಿಬಿರನ ಬೇರೆ ಬೇರೆ ಊರುಗಳ್ಲಿ. ಹಮ್ಮಿಕಣಕುತೇಳುವ ನಿರ್ಧಾರ ಮಾಡಿದ್ದೊ. ಆದರೆ ಪರಿಸ್ಥಿತಿ ನಮಗೆ ಪೂರಕವಾಗಿ ಇತ್ಲೆ. ಕೊರೊನಾಂದಾಗಿ ಎರಡನೇ ಲಾಕ್‌ಡೌನ್ ಸುರು ಆತ್. ಈ ಹೊತ್ತ್‌ಲಿ, ಹಿಂಗಾರ ಸಂಚಿಕೆ ತಂದ್ ನಿಮ್ಮ ಕೈಲಿ ಇಸಿಯೊಳೊ. ನಮ್ಮ ಮುಂದಿನ ಯೋಜನೆಗಳ ಕಾರ್ಯರೂಪಕೆ ತಂದ್ ಇಳ್ಸಿ, ಮತ್ತೆ ನಿಮ್ಮ ಮುಂದೆ ಬಂದವೆ. ನಿಮ್ಮ ಬೆಂಬಲ, ಹಾರೈಕೆ ಸದಾ ನಮ್ಮೊಟ್ಟಿಗಿರ್ಲಿ.

ನಮಸ್ಕಾರಗ

**ಲಕ್ಷ್ಮೀನಾರಾಯಣ ಕಜೆಗದ್ದೆ**



# ಸಂಪಾದಕರ ಮಾತ್

ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕನ ಓದ್‌ವ ಪ್ರೀತಿಯ ಎಲ್ಲ ಅರೆಬಾಸೆ ಓದ್‌ಗರಿಗೆ ನಮಸ್ಕಾರಗ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ  ಹೊರತರ್‌ತ್ತಿರ್‌ವ ಹಿಂಗಾರ ತ್ರೈಮಾಸಿಕನ ಚಂದಾದಾರರಾಗಿ, ನಿರಂತರ ಓದಿಕಂಡ್ ಮೌಲ್ಯದ ಬರಹಗಳ್ನ ಹಂಗೆನೆ ಒಳ್ಳೆ ಸಲಹೆಗಳ್ನ ಕೊಟ್ಟ್ ಸಹಕರಿಸ್ತಿರುವ ನಿಮಿಗೆ ನಮಸ್ಕರಿಸಿನೆ. ವಿ.ಕೃ ಗೋಕಾಕ್‌ತೇಳುವ ಸಾಹಿತಿ 'ಓದಿ ಮರ್‌ಳಾಗ್ ಬಡ, ಓದದೆನೂ ಮರ್‌ಳಾಗ್ ಬಡ; ಓದಿ ಹುರುಳಾಗ್' ತೇಳ್ಯೊಳೊ, ಹಾಂಗೆ ನಮ್ಮ ಎಲ್ಲ ಓದ್‌ಗರ್ ಹುರಳಾಗಿ ಅಂತ ಬಯ್‌ಸೊನೊ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ನಾಲ್ಕನೆ ಸಂಪುಟದ ಆರನೇ ಸಂಚಿಕೆ. ಈ ಸಂಚಿಕೆಲಿ 2021ರ ಏಪ್ರಿಲ್‌ಂದ ಜೂನ್ ತಿಂಗಳ್ನವರೆಗಿನ ಸಂಗತಿಗಳ್ನ ನಿಮ್ಮ ಮುಂದೆ ಇಸಿಯೊಳೊ.

ಈ ಸಂಚಿಕೆಲಿ ಅಂತರಾಷ್ಟ್ರ ಮಟ್ಟದ ಹಿರಿಯ ಅಥ್ಲೇಟ್ ಎಡಿಕೇರಿ ವಿಶಾಲಾಕ್ಷಿಯವರ ಪರಿಚಯನ ಕೂಡಕಂಡಿ ಓಂಶ್ರೀ ದಯಾನಂದನವು ಮಾಡ್ಯೊಳೊ. ಸಂಸ್ಕೃತಿ ದರ್ಪಣಲಿ ಡಾ ಕರುಣಾಕರ ನಿಡಿಂಜಿಯವ್ರ 'ಪದ್ಯದೊಟ್ಟಿಗೆ ಪಾದಯಾತ್ರೆ' ತೇಳುವ ಬರವಣಿಗೆನ, ಅನುಭವ ವಿಭಾಗಲಿ ಹಾರಂಬಿ ಯತೀನ್ ವೆಂಕಪ್ಪವ್ರ 'ಸಾಹೇಬ್ರು ಬಂದವೆ...... ನಾ ಕಂಡಾಂಗೆ' ತೇಳುವ ಅನುಭವನ ಹಂಚಿಕೊಂಡೊಳೊ. ಕುಂಞೇಟಿ ಶಿವರಾಮಗೌಡ(ವ್ಯಾಸ)ರ್ 'ಲಂಚ'  ಮತ್ತೆ ಅನುಷಾಳ 'ಆಟಕ್ಕೆ ಉಟ್ಟು ಲೆಕ್ಕಕ್ಕೆ ಇಲ್ಲೆ' ತೇಳುವ ವೈಚಾರಿಕ ಲೇಖನನ  ಪ್ರಕಟಿಸ್ಯೊಳೊ.

ಕಥಾ ಜೊಂಪೆ ವಿಭಾಗಲಿ ಕುಂದಲ್ಪಾಡಿ ಲೀಲಾ ದಾಮೋದರವು ಬರ್ದ 'ನಾವೂ ನಮ್ಮ ಬಸ್ಸು' ಮತ್ತೆ ಪ್ರಿಯಾಂಕ ತೀರ್ಥರಾಮವು ಬರ್ದ 'ಹಾಂತೆ' ಕಥೆ ಹಾಂಗೆ ಪುರಾಣ ಕಥಾ ಜೊಂಪೆಲಿ ಚೊಕ್ಕಾಡಿ ಜನನಿ ರಾಘವಯ್ಯವು ಬರ್ದ 'ಆ ಒಂದು ಊರ್‌ನ ಹಬ್ಬದ ವಿಶೇಷತೆ' ಮತ್ತೆ

ಗಾದೆನ ಕಥೆಲಿ ಡಾ ಕೋರನ ಸರಸ್ವತಿ ಪ್ರಕಾಶ್‌ವು ಬರ್ದ 'ಅಕ್ಕ ಸಾಲಿಗನಂಥ ಕಳ್ಳ ಇಲ್ಲೆ, ಮಕ್ಕಿಗದ್ದೆನಂತ ಬೆಳೆ ಇಲ್ಲೆ' ತೇಳುವ ಕಥೆನ ಪ್ರಕಟಿಸ್ಯೊಳೊ. ಹರಟೆ ಮತ್ತೆ ಹಾಸ್ಯ ವಿಭಾಗಲಿ ಜೈನಿರ ಕವಿತಾ ಕಿರಣ್‌ವು ಬರ್ದ 'ಬನ್ನಿ ಹರಟೆ ಹೊಡಿಯೋಮೊ ಮನ್ಸ್ ಹತ್ರ ಆಕು' ಹಾಂಗೆ ಸೀತಾರಾಮ ಕೇವಳವು ಬರ್ದ 'ಒಬಮಾ' ಪ್ರಕಟಿಸ್ಯೊಳೊ. ವಿಜ್ಞಾನ ವಿಭಾಗಲಿ ವಿಶ್ವನಾಥ ಎಡಿಕೇರಿವು ಬರ್ದ 'ಅಕಾಶ ಮತ್ತೆ ಚಂದ್ರು' ತೇಳುವ ಬರಹನ ಪ್ರಕಟಿಸ್ಯೊಳೊ. ಕವನ ವಿಭಾಗಲಿ ಕುಸುಮಾಕರ ಅಂಬೆಕಲ್ಲುವು ಬರ್ದ 'ಗದ್ದೆನ ಒಮ್ಮೆ ಸುತ್ತೋನಾ', ಬಡುವಂಡ್ರ ವಿದ್ಯಾ ಲಕ್ಷ್ಮೀಪತಿಯವು ಬರ್ದ 'ತವುರು ಮತ್ತೆ ತವುರ್‌ನ ಗೂಡೆಗ' ಹಾಂಗೆ ಲೀಲಾಕುಮಾರಿ ತೊಡಿಕಾನವು ಬರ್ದ 'ಉಗ್ಗವನ ಎಲಡ್ಕೆ ಚೀಲ' ತೇಳುವ ಕವನನ ಪ್ರಕಟಿಸ್ಯೊಳೊ. ಬನ್ನಿ ಓದೋಮಂತೇಳುವ ಅಂಕಣಲಿ ಡಾ ಯು.ಆರ್ ಅನಂತಮೂರ್ತಿವು ಬರ್ದ 'ಮೌನಿ' ತೇಳುವ ಸಣ್ಣ ಕಥೆನ ಒಂದು ಕಂಡಿಕೆನ ಪ್ರಕಟಿಸ್ಯೊಳೊ. ತೆಕ್ಕಡೆ ಕುಮಾರಸ್ವಾಮಿನವು ನಮ್ಮ ಜೀವನಲಿ ಮುಖ್ಯವಾದ ವಸ್ತು ಚೆಂಬುನ ಬಗ್ಗೆ ಮಾಹಿತಿನ ಈ ಸಂಚಿಕೆಲಿ ಕೊಟ್ಟೊಳೊ.

ಈ ಸಂಚಿಕೆಲಿ ಪ್ರಕಟ ಆದ ಬರವಣಿಗೆಗೆ ಚಿತ್ರಕಲಾವಿದ ಪ್ರಸನ್ನ ಐವರ್ನಾಡು ಇವು ಗೆರೆಗಳ ಮೂಲಕ ಜೀವ ತುಂಬ್ಯೊಳೊ. ಸಂಚಿಕೆನ ಹೊರತಾಕೆ ಅಕಾಡೆಮಿನ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್ ಮತ್ತೆ ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣಿಗೆಗಳನ್ನ ನೀಡಿ ಸಂಚಿಕೆನ ಮೆರ್‌ಗ್‌ನ ಜಾಸ್ತಿ ಮಾಡ್ಯೊಳೊ. ಪ್ರತಿ ತಿದ್ದುವಲ್ಲಿ ಸಂಪಾದಕ ಮಂಡಳಿನ ಸಹಸಂಪಾದಕ ಪುರುಷೋತ್ತಮ ಕಿರ್ಲಾಯವು ಹಾಂಗೆ ವಿನೋದ್ ಮೂಡಗದ್ದೆಯವುಕ್ಕೆ ಕೈ ಜೋಡಿಸ್ಯೊಳೊ. ತೆಕ್ಕಡೆ ಕುಮಾರಸ್ವಾಮಿನವು ಮುಖಪುಟದ ಚಿತ್ರ ಕೊಟ್ಟೋಳೊ. ಆಕೃತಿ ಪ್ರಿಂಟ್ಸ್, ಮಂಗಳೂರು ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಳೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಧನ್ಯವಾದಗಳ್‌ನ ಅರ್ಪಿಸಿನೆ.

ದಿನಾಂಕ: 30.06.2021

**ಡಾ. ದಯಾನಂದ ಕೂಡಕಂಡಿ**
ಸಂಪಾದಕರ್

ಪ್ರಕಟ ಆದ ಬರವಣಿಗೆಗೆ ಆಯಾ ಬರಹಗಾರರೆ ಜವಾಬ್ದಾರರ್

# ಹಿಂಗಾರ ಒಡ್ಸ್‌ಕನ

**ಗಾದೆನ ಕಥೆ**



**ಹರಟೆ ಮತ್ತ್ ಹಾಸ್ಯ**



**ವಿಜ್ಞಾನ ಜೊಂಪೆ**



**ಬನ್ನಿ ಓದೋಮ**



**ಕವನ**



**ಮುಖಪುಟ ಚಿತ್ರದ ಪರಿಚಯ**


ವ್ಯಕ್ತಿ ಪರಿಚಯ

# ಅಂತರಾಷ್ಟ್ರ ಮಟ್ಟದ ಹಿರಿಯ ಅಥ್ಲೇಟ್ ಎಡಿಕೇರಿ ವಿಶಾಲಾಕ್ಷಿ

**ಓಂಶ್ರೀ ದಯಾನಂದ, ಕೂಡಕಂಡಿ**

ಮನಸ್ಸಿದ್ದರೆ ಮಾರ್ಗಂತೇಳುವಂಗೆ ಮನಸ್ಸಿದ್ದರೆ ಏನ್ ಬೇಕಾದರ್ ಮಾಡಕ್‌ಂತೇಳ್ದುಕೆ ಅಂತರಾಷ್ಟ್ರ ಮಟ್ಟದ ಹಿರಿಯ ಅಥ್ಲೇಟ್ ಎಡಿಕೇರಿ ವಿಶಾಲಾಕ್ಷಿಯವು ಸಾಕ್ಷಿ. ಇವು ಹಿರಿಯರ ವಿಭಾಗಲಿ ಅಂತರಾಷ್ಟ್ರ, ರಾಷ್ಟ, ರಾಜ್ಯ ಹೀಂಗೆ ಬೇರೆ ಬೇರೆ ವಿಭಾಗಲಿ ಚಿನ್ನ, ಬೆಳ್ಳಿ, ಕಂಚಿನ ಪದಕಗಳ್ನ ಪಡ್ಕಂಡ್ ನಮ್ಮ ಜನಾಂಗದ ಹಿರಿಮೆನ ಹೆಚ್ಚಿಸ್ಯೋಳೊ.

ಅಥ್ಲೇಟ್ ಎಡಿಕೇರಿ ವಿಶಾಲಾಕ್ಷಿಯವು ಏಪ್ರಿಲ್ 28, 1962ರ್‌ಲಿ ಭಾಗಮಂಡ್ಲ ನಾಡ್, ತಾವೂರು ಗ್ರಾಮದ ಚೆದುಕಾರ್ ದಿವಂಗತ ಗಣಪತಿ ಮತ್ತೆ ದಿವಂಗತ ಗೌರಮ್ಮರ ಮಗಳಾಗಿ ಹುಟ್ಟಿದೊ. ಇವು ತಾವೂರು ಮತ್ತೆ ಭಾಗಮಂಡ್ಲಲಿ ಪ್ರಾಥಮಿಕ ಶಾಲೆ ಶಿಕ್ಷಣನ ಮುಗ್‌ಸಿ ಪ್ರೌಢಶಾಲೆ ಮತ್ತೆ ಪದವಿ ಪೂರ್ವ ಶಿಕ್ಷಣನ ಶ್ರೀ ಕಾವೇರಿ ಪದವಿ ಪೂರ್ವ ಕಾಲೇಜ್, ಭಾಗಮಂಡ್ಲಲಿ ಮುಗ್ಸಿದೊ. ಇವು ಮಡಿಕೇರಿ ತಾಲ್ಲೂಕು ಬಲ್ಲಮಾವಟ್ಟಿ



ಗ್ರಾಮದ ಎಡಿಕೇರಿ ನರೇಶ್‌ರವರ್ನ  ಮೊದುವೆ ಆಗಿ ಸದ್ಯ ಮಡಿಕೇರಿನ ಇಂದಿರಾ ನಗರಲಿ ನೆಲೆಸ್ಯೋಳೊ. ಪ್ರಸ್ತುತ ಇವು ಕೊಡಗು ಜಿಲ್ಲೆನ, ಮಡಿಕೇರಿಲಿ ಗೃಹರಕ್ಷಕ ದಳಲಿ ವೃತ್ತಿಜೀವನ ನಡಿಸ್ತೊಳೊ.

ಎಡಿಕೇರಿ ವಿಶಾಲಾಕ್ಷಿಯವು ವಯಸ್ಕರ ವಿಭಾಗದ ಓಟ, ವೇಗದ ನಡಿಗೆ, ಜಾವಲಿನ್ ಥ್ರೋ, ರಿಲೇ, ಭಾರದ ಗುಂಡು ಎಸೆತ ಹೀಂಗೆ ಬೇರೆ ಬೇರೆ ವಿಭಾಗಲಿ ಇವರ ಸಾಧನೆನ ಗುರ್‌ತಿಸಿ 2014ರ್‌ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಸಿಕ್ಕಿಯುಟು. 2021ರ ಅಂತರಾಷ್ಟ್ರೀಯ ಮಹಿಳಾ ದಿನದಂದ್ ಇವರ ಸಾಧನೆಗೆ ಕರ್ನಾಟಕ ರಾಜ್ಯ ಸರ್ಕಾರದ ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿನ ಆಗನ ಮುಖ್ಯಮಂತ್ರಿಯಾಗಿದ್ದ ಶ್ರೀಯುತ ಬಿ.ಎಸ್. ಯಡಿಯೂರಪ್ಪ ಅವರ್‌ಂದ  ಸ್ವೀಕರ್ಸಿದೊ. 2010ರ್‌ಲಿ ಕೊಡಗು ಜಿಲ್ಲಾ ಅತ್ಯುತ್ತಮ ಕ್ರೀಡಾಪಟು ಪ್ರಶಸ್ತಿನ ಪಡ್ಕೊಂಡೊಳೊ. ಜೊತೆಗೆ ಹಲವಾರ್ ಸಂಘ ಸಂಸ್ಥೆಗ ಇವರ ಸಾಧನೆನ ಗುರ್‌ತಿಸಿ ಸನ್ಮಾನ, ಗೌರವ, ಬಹುಮಾನನ ನಿಡ್ಯೊಳೊ. ಕುಲದೇವರು ಶ್ರೀ ವೆಂಕಟರಮಣ ಸ್ವಾಮಿ ಇವುಕ್ಕೆ ಇನ್ನೂ ಹೆಚ್ಚಿನ ಸಾಧನೆ ಮಾಡಿಕೆ ಆರೋಗ್ಯ, ಶಕ್ತಿ, ಆಯುಷ್ಯ, ಐಶ್ವರ್ಯ, ನೆಮ್ಮದಿ, ಸುಖ, ಶಾಂತಿ ನೀಡಿ ನಮ್ಮ ಜನಾಂಗದ ಕೀರ್ತಿನ ಹೆಚ್ಚಿಸಲಿ ಅಂತ ಬೇಡಿಕಂಬೊನೊ.

**ಇವರ ಸಾಧನೆಗ:**

**ಅಂತರಾಷ್ಟ್ರ ಮಟ್ಟದ ಸಾಧನೆಗ**

| **ವರ್ಷ** | **ಸ್ಥಳ** | **ವಿಭಾಗ** | **ಸಾಧನೆ** |
|---|---|---|---|
| 2018 | ಥೈಲಾಂಡ್ | 5 ಕಿ.ಮೀ ವೇಗದ ನಡಿಗೆ | 5ನೇ ಸ್ಥಾನ |
| 2014 | ಶ್ರೀಲಂಕಾ | 800 ಮೀ ಓಟ | ಚಿನ್ನದ ಪದಕ |
| 2013 | ಶ್ರೀಲಂಕಾ | 5000 ಮೀ ಓಟ | ಕಂಚಿನ ಪದಕ |
| 2010 | ಪೂನಾ | ಏಷ್ಯನ್ ಮೀಟ್ 5000 ಮೀ ಓಟ | ಬೆಳ್ಳಿ ಪದಕ |
| | | ಏಷ್ಯನ್ ಮೀಟ್ ವೇಗದ ನಡಿಗೆ | ಕಂಚಿನ ಪದಕ |

**ರಾಷ್ಟ್ರ ಮಟ್ಟದ ಸಾಧನೆಗ**

| ವರ್ಷ | ಸ್ಥಳ | ವಿಭಾಗ | ಸಾಧನೆ |
|---|---|---|---|
| 2020 | ಕ್ಯಾಲಿಕಾಟ್ | ರೀಲೆ | ಚಿನ್ನದ ಪದಕ |

| | | | |
|---|---|---|---|
| | | 5 ಕಿ.ಮೀ ನಡಿಗೆ | ಬೆಳ್ಳಿ ಪದಕ |
| 2017 | ಲಕ್ನೋ | 5 ಕಿ.ಮೀ ನಡಿಗೆ | ಚಿನ್ನದ ಪದಕ |
| | | ಜಾವಲಿನ್ ಥ್ರೋ | ಕಂಚಿನ ಪದಕ |
| 2016 | ನಾಶಿಕ್ | 5 ಕಿ.ಮೀ ನಡಿಗೆ | ಬೆಳ್ಳಿ ಪದಕ |
| | | ಬಾರದ ಗುಂಡು ಎಸೆತ | ಕಂಚಿನ ಪದಕ |
| 2015 | ಹರಿಯಾಣ | 5000 ಮೀ ಓಟ | ಚಿನ್ನದ ಪದಕ |
| | | 800 ಮೀ ಓಟ | ಬೆಳ್ಳಿ ಪದಕ |
| | | 5 ಕಿ.ಮೀ ನಡಿಗೆ | ಚಿನ್ನದ ಪದಕ |
| | | 400 ಮೀ 4ರಿಲೇ | ಚಿನ್ನದ ಪದಕ |
| | | 1500 ಮೀ ಓಟ | ಬೆಳ್ಳಿ ಪದಕ |
| 2015 | ಮುಂಬೈ | 3.ಕಿ.ಮೀ ನಡಿಗೆ | ಚಿನ್ನದ ಪದಕ |
| | | 800 ಮೀ ಓಟ | ಬೆಳ್ಳಿ ಪದಕ |
| | | 1500 ಮೀ ಓಟ | ಬೆಳ್ಳಿ ಪದಕ |
| | | ಜಾವಲಿನ್ ಥ್ರೋ | ಬೆಳ್ಳಿ ಪದಕ |
| 2014 | ಕೊಯಮುತ್ತೂರು | 5 ಕಿ.ಮೀ ನಡಿಗೆ | ಕಂಚಿನ ಪದಕ |
| 2014 | ಮಂಗಳೂರು | 4*400 ರಿಲೇ | ಚಿನ್ನದ ಪದಕ |
| | | 5 ಕಿ.ಮೀ.ನಡಿಗೆ | ಚಿನ್ನದ ಪದಕ |
| | | 5000 ಮೀ ಓಟ | ಬೆಳ್ಳಿ ಪದಕ |
| 2013 | ಬೆಂಗಳೂರು | 5 ಕಿ.ಮೀ.ನಡಿಗೆ | ಚಿನ್ನದ ಪದಕ |
| | | 1500 ಮೀ ಓಟ | ಬೆಳ್ಳಿ ಪದಕ |
| 2012 | ಬೆಂಗಳೂರು | 5000 ಮೀ ಓಟ | ಚಿನ್ನದ ಪದಕ |
| | | 4*400 ರಿಲೇ | ಚಿನ್ನದ ಪದಕ |
| | | 5 ಕಿ.ಮೀ.ನಡಿಗೆ | ಬೆಳ್ಳಿ ಪದಕ |
| | | 4*100 ರಿಲೇ | ಬೆಳ್ಳಿ ಪದಕ |
| 2012 | ಮೈಸೂರು | ಆಲ್‌ಇಂಡಿಯಾ ಮಾಸ್ಟರ್ಸ್ | |
| | | ಕ್ರಾಸ್‌ಕಂಟ್ರಿ 5 ಕಿ.ಮೀ | ನಾಲ್ಕನೇ ಸ್ಥಾನ |
| 2011 | ಬೆಂಗಳೂರು | 5 ಕಿ.ಮೀ.ನಡಿಗೆ | ಬೆಳ್ಳಿ ಪದಕ |
| | | 4*400 ರಿಲೇ | ಬೆಳ್ಳಿ ಪದಕ |
| | | 5000 ಮೀ ಓಟ | ಬೆಳ್ಳಿ ಪದಕ |

| | | | |
|---|---|---|---|
| 2011 | ತಮಿಳುನಾಡು | 200 ಮೀ ಓಟ | ಚಿನ್ನದ ಪದಕ |
| | | 4*100 ರಿಲೇ | ಚಿನ್ನದ ಪದಕ |
| | | 3 ಕಿ.ಮೀ.ನಡಿಗೆ | ಚಿನ್ನದ ಪದಕ |
| | | 1500 ಮೀ ಓಟ | ಬೆಳ್ಳಿ ಪದಕ |
| 2009 | ಲಕ್ನೋ | 1500 ಮೀ ಓಟ | ಚಿನ್ನದ ಪದಕ |
| | | 5000 ಮೀ ಓಟ | ಬೆಳ್ಳಿ ಪದಕ |
| | | 5 ಕಿ.ಮೀ.ನಡಿಗೆ | ಬೆಳ್ಳಿ ಪದಕ |
| 2008 | ಪಾಂಡಿಚೇರಿ | 5000 ಮೀ ಓಟ | ಚಿನ್ನದ ಪದಕ |
| | | 800 ಮೀ ಓಟ | ಚಿನ್ನದ ಪದಕ |
| | | 5 ಕಿ.ಮೀ.ನಡಿಗೆ | ಚಿನ್ನದ ಪದಕ |

ಇದಲ್ಲದೆ ರಾಜ್ಯ ಮಟ್ಟದ ಕ್ರೀಡಾಕೂಟಲಿ 21 ಚಿನ್ನದ ಪದಕ, 6 ಬೆಳ್ಳಿ ಪದಕ, 4 ಕಂಚಿನ ಪದಕ ಪಡ್ದೊಳೊ. ಇಷ್ಟೆಲ್ಲ ಸಾಧನೆ ಮಾಡ್ದ ಎಡಿಕೇರಿ ವಿಶಾಲಾಕ್ಷಿಯವುಕ್ಕೆ ಇನ್ನೂ ಹೆಚ್ಚು ಸಾಧನೆ ಮಾಡಿಕೆ ದೇವರು ಹರಸಲಿ.

ಇವರ ದೂರವಾಣಿ : 8867318427

**ಶ್ರೀಮತಿ ಓಂಶ್ರೀ ದಯಾನಂದ**
ಕೂಡಕಂಡಿ ಮನೆ, ಭಾಗಮಂಡಲ
ಮೊಬೈಲ್ ಸಂಖ್ಯೆ : 6363376487




# ಪದ್ಯದೊಟ್ಟಿಗೆ ಪಾದಯಾತ್ರೆ

## ಅರೆಬಾಸೆ ಪದ್ಯಗಳ ಸುತ್ತ ಮಾತ್‌ಕತೆ – ಒಂದು ಪ್ರಯೋಗ

**ಡಾ. ಕರುಣಾಕರ ನಿಡಿಂಜಿ**

ಕೆಲೊವು ದಿನದ ಹಿಂದೆ ಅರೆಬಾಸೆ ಅಕಾಡೆಮಿಂದ ನಂಗೊಂದು ಕಾಗದ ಬಾತ್. ನಿಮ್ಮ ಪದ್ಯನ ನಾವು ರಾಗ ಹಾಕಿ ಹೇಳುವೆ; ನಿಮ್ಮ ಒಪ್ಪಿಗೆ ಬೇಕೂಂತ. ಪದ್ಯ ಇತ್ಯಾದಿ ಸಾಹಿತ್ಯನ ಒಮ್ಮೆ ಬರ್ದಮೇಲೆ ಅದ್ ಓದುವವರ ಸೊತ್ತು. ಹಾಂಗಾಗಿ, ಅವುಕ್ಕೆ ನಾ ಒಪ್ಪಿಗೆ ಕೊಟ್ಟೆ. ಅದರೊಟ್ಟಿಗೇ ನನ್ನ ಪದ್ಯಗಳ ಬಗ್ಗೆ ನಾನೇ ಯಾಕೆ ಮಾತಾಡಿ ಕಾಗದ್‌ತನೂ ಒಂದು ಗೇನ ಬಾತ್. ಇದರ ನನ್ನ ಜೋಸ್ತಿಗಳೊಟ್ಟಿಗೆ ಕೇಳಿದ್ದೆ. ನಮ್ಮ ಬಗ್ಗೆ ನಾವೇ ಬರಿದು ಸರಿಯಾದೋಂತ ಹಂಞ ಅನುಮಾನ ಹೇಳ್ದೊ. ಅದೂ ನಿಜನೇ. ಕನ್ನಡ ಬಾಸೆಲಿ ಬಂದ ಸಾಹಿತ್ಯ ಮತ್ತೆ ಕವಿಗಳ ನೋಡಿಕನ ಎಲ್ಲಿನೂ ಇಂತದೊಂದು ಕ್ರಮ ನಂಗೆ ಕಂಡದ್ ಇಲ್ಲೆ. ಅಲ್ಲಿ ಇಲ್ಲೆಂತೇಳಿ, ಇಲ್ಲಿ ಇರಿಕಾಗದ್ ತೇನೂ ಇಲ್ಲೆಲೆ? ಆದರೆ, ನಮ್ಮ ಬೆನ್ನ್ ನಾವೇ ತಟ್ಟಿಕಂಡಾಂಗಾದುಂತೇಳ್ವ ಗೇನನೂ ಒಟ್ಟಿಗೆ ಬಾತ್. ಆದರೂ,

ನನ್ನ ಪದ್ಯಕೂ ನಂಗೂ ಒಂದು ಅಂತರ ಇಸಿಕಂಡ್ ಯಾಕೆ ಇದರ ಬರಿಯಕಾಗದ್? ಹೀಗೊಂದು ಕೆಲ್ಸ ಮಾಡಿನೋಡೊಕುಂತ ಈ ಲೇಕನ ಬರ್ಕಂಡೊಳೆ. ನನ್ನ ಪದ್ಯದ ಬಗ್ಗೆ ಹೆಚ್ಚಿಗೆ ಹೇಳಿರೆ, ಪದ್ಯ ಓದುವವುಕೆ ಕಂಡಿತ ಗೊತ್ತಾದು. ನಂಗೂ ಕೂಡ ನಾ ಬರ್ದದರ್ಲಿ ಇಲ್ಲದ್ದರ ಹೇಂಗೆ ಹೇಳಿಕಾದು? ಅಡ್ಕಲಿ ಅಡ್‌ಂಗಿಕೆ ಆದೋ? ಇದ್ ಈ ಬರಹದ ಹಿಂದೆನ ಗೇನ. ಲೇಕನ ಓದೊವುಕೆ ಅನುಕೂಲಕೆಂತ ಮುಂದೆ ಪದ್ಯನ ಕೊಟ್ಟೊಳೆ.

ನೆಗೆಬೇಕು ನೆಗೆಬೇಕು ಕೇದೆಗೆ ಗೊನೆ ಹಾಂಗೆ
ನೆಗೆಬೇಕು ಮಕ್ಕಳ ಹೂ ನೆಗೆನಾಂಗೆ
ಬಾರದ ಬಂಗ ಬಂದ್ ಸಿಕ್ಕಕಾದ್ದ್ ಸಿಕ್ಕದೆ
ಬೊಚ್ಚಿಬಾಡುವ ಹೊತ್ತ್ ನೆಗೆ ಬೇಕು

ಹಗ್‌ಲ್ ಸುಡುವ ಹೊತ್ತು ಬೊಳ್ಪಿಗೆ ಹಿಂಬೊತ್ತ್
ತಂಪು ಕೆಂಪಾಗಿ ದಾಟಿ ಹೋವಾಂಗೆ
ಎಲ್ಲಿಂದಳೋ ಗುದ್ದಿ ಎತ್ತಂದಳೋ ಕೊಯ್ದ್
ಕಾಸಿ ಬೇಸಿಕನನೂ ನೆಗೆ ಬೇಕು

ಎಷ್ಟೆ ಸುತ್ತಿರು ಸುತ್ತಿ ಮುಚ್ಚಿಸಿರೂ
ಮಲ್ಲಿಗೆ ಗಮ ಸುತ್ತಿ ಸುಳಿವಾಂಗೇ
ಹಳ್ಳ ಹರ್‌ಪು ಕಟ್ಟಿ ಪಚ್ಚೆ ಕಾಡ್ ಬಾಡಿ
ಇಚ್ಚೆ ಇರದಿರಿಕನನೂ ನೆಗೆ ಬೇಕು
ನಮ್ ಕೈಲಿಲ್ಲದ್ದ್ ಇಚ್ಚೆನಾಂಗಾಗದ್ದ್
ಎಂತವಂಗು ಎಂದೂ ತಪ್ಪದೆ ಬಾದು
ಬಾಕನ ಹೋಕನ ನಡುಲಿ ಸಿಕ್ಕಿರಿಕನ
ಸಣ್ಣದಾದರೂ ಒಂದು ನೆಗೆ ಬೇಕು.

ಇದೇನೂ ಅಂತಾ ಗಹನ ಗಂಬೀರ ಅರ್ತದ ಪದ್ಯ ಅಲ್ಲ. ಸಾಮಾನ್ಯ ಪದ್ಯ. ಹಾಂಗೆಂತ ಇಡೀ ಪದ್ಯ ಬೊದ್ಕ್‌ಲಿ ನೆಗೆ ಬೇಕುಂತ ಹೇಳ್ದೆ. ಇದೂ ಸಾಮಾನ್ಯ ಸಂಗತಿನೇ ಆದರೂ ಎಲ್ಲೊವೂ ಗೇನ ಮಾಡಿನೊಡಕಾದ ಸಂಗತಿಮಾತ್ರ ಹೌದು. ಇಂದ್ ನಾವು ನೆಗೆನೆ ಮರ್ತ್ ಕಂಡ್ ಬೊದ್ಕುವೆನೋಂತ ಹೇಳುವಷ್ಟರ ಮಟ್ಟಿಗೆ ಗಂಬೀರತೆಲಿ

ಬೊದ್ಕುವೆನೋಂತ ನಂಗೊಂದು ಗುಮಾನಿ. ಮಕ್ಕಂತೂ ನೆಗೆ ಮಾತ್ ಎಲ್ಲ ಬುಟ್ಟ್ ಅವರ ಮೊಬೈಲ್ ಲೋಕಲಿ ಮುಣ್‌ಂಗಿ ಹೋಕಂಡೊಳೊ. ಆದರೆ, ನೆಗೆ ಇಲ್ಲದ ಬೊದ್ಕ್‌ನಷ್ಟ್ ಬೇಜಾರ್ ಬೇರೆ ಯಾದುಟ್ಟು ಹೇಳಿ? ಪ್ರಕೃತಿಲಿ ನೆಗಾಡಿಕೆ ಆದು ನಂಗೆ ಗೊತ್ತಿದ್ದಾಂಗೆ ಮೊಯಿಂಸಂಗೆ ಮಾತ್ರ. (ನಾಯಿಗೂ ಆದೆ ಗಡ. ಆದರೆ ಅದ್ ಗೊತ್ತಾದು ಅದರ ಎಜ್‌ಮಾನಂಗೆ ಮಾತ್ರಗಡ. ನಾಯಿ ನಿಮ್ಮ ಮನೆಲಿದ್ದರೆ ಒಮ್ಮೆ ಪರೀಕ್ಷೆ ಮಾಡಿ ನೋಡಿ) ನೆಗಾಡುವಾಂಗೆ ಮಾತಾಡವರ ಎಲ್ಲೊವುಕೂ ತುಂಬ ಮೆಚ್ಚಿಗೆ ಆದೆ ಕೂಡ. ಅಂತವು ಇದ್ದಲ್ಲಿ ಅವರ ಸುತ್ತ ಸಕ್ಕರೆಗೆ ಪಿಜಿನ್ ಸೇರ್ದಾಂಗೆ ಜೆನ ಸೇರುವೆ. ಇನ್ನೊಬ್ಬ ಹೇಳಿಕನ ನೆಗೆಬಾದು ಸುಲಬ. ಹಾಂಗೆಂತೇಳಿ ನೆಗೆ ಬಾವಾಂಗೆ ಮಾತಾಡಿಕೆ ಎಲ್ಲೊವುಕೂ ಆದುಲೆಂತೇಳುದೂ ಸತ್ಯನೇ. ಆದರೆ ನೆಗೆ ಬೊದ್ಕ್‌ಲಿ ಒಂದು ಟಾನಿಕ್ ಇದ್ದ ಹಾಂಗೆಂತೇಳಿರೆ ಯಾರೂ ಅಲ್ಲಾಂತ ಹೇಳಿಕಿಲೆ. ನೆಗೆಲಿ ಎಷ್ಟ್ ತರಂತ ಹೇಳ್ದಕಿಂತ ಒಮ್ಮೆ ಗೇನ ಮಾಡಿ ನೋಡಿಕಂಬೊದೇ ಉತ್ತಮ. ಅಷ್ಟೊಂದು ತರಲಿ ನಾವು ನೆಗಾಡುವೆ. ಕೆಲೊವು ಜೆನ ನೆಗಾಡ್ರೆ ಕಕ್ಕೆ ಆಗಲಿ ಹಕ್ಕಿ ಆಗಲಿ ಸುತ್ತ ಎಲ್ಲಿನೂ ನಿಲ್ಲಿಕಿಲೆ. ಇನ್ನ್ ಕೆಲೊವು ಸೋಡ ಕುಪ್ಪಿ ಒಡ್ದಾಂಗೆ ಪಿಸ್ಕ್‌ಂತ ನೆಗಾಡ್ರೆ. ಇನ್ನೂ ಕೆಲೊವು ಜೆನ ನೆಗಾಡ್ರೆ. ಅವರ ಮೋರೆ ನೋಡದಿದ್ದರೆ ನೆಗಾಡ್ವೆಂತ ಗೊತ್ತೇ ಆಕಿಲೆ. ಇನ್ನ್ ಕೆಲೊವು ಜೆನ ನೆಗಾಡಿಕನ ಎರ್ಡ್ ಕೈಲಿ ತಪ್ಪಳಗುಟ್ಟಿ ನೆಗಾಡುವೆ. ಕೆಲವರ ಬುಜ ನೆಗಾಡಿಕನ ತಕತಕ ಕೊಣ್ದದೆ. ಕನ್ನಡ ಬಾಸೆಲಿ, ಬಿದ್ದ್ ಬಿದ್ದ್ ನೆಗಾಡ್ದೊಂತ ಹೇಳುವ ಮಾತುಟ್ಟು. ಅಂದರೆ, ಅಂವ ಒಮ್ಮೆ ನೆಗಾಡಿ ಬಿದ್ದ್‌ದ್, ಮತ್ತೆ ಅಲ್ಲಿಂದ ಎದ್ದ್ ನೆಗಾಡುದಲ್ಲ. ಇದರ ಹೇಳಿಕನನೇ ನಾವುಗೆ ನೆಗೆ ಬಂದದೆ. ಅಂದರೆ, ನೆಗಾಡಿ ಆಯತಪ್ಪಿ ಬೀಳುವಷ್ಟರ ಮಟ್ಟಿಗೆ ನೆಗಾಡ್ತ್‌ಂತ ಅರ್ತ.

ತಮಿಳು ಜೆನಗಳ –ಹಾಸ್ಯಪ್ರಜ್ಞೆ–ಲಾಯ್ಕ್, ಹೀಂಗೆ ಹೇಳ್ದೊವು ಪ್ರೊ. ಕುಶಾಲಪ್ಪ ಗೌಡ್ರ್. ಅದ್ ನೂರಕ್ಕೆ ನೂರು ಸತ್ಯನೂ ಹೌದು. ನೆಗೆಬರುವಂತ ಸಂದರ್ಭಗಳ ಸೃಷ್ಟಿ ಮಾಡ್ದರ್ಲಿನೂ, ಇನ್ ಕೆಲವು ಸರ್ತಿ ಏನೂ ವಿಷಯನೇ ಇಲ್ಲದಿದ್ದರೂ ನೆಗಾಡ್ಸುದರ್ಲಿನೂ ಅವು ಉಸಾರ್.

ನಾವು ಬೇನೆ ಬೇಜಾರ್ ಗೊತ್ತಾದ ಮೊಂಯಿಸರ್ ನೆಗಾಡ್ದಕೂ, ಅದೇನೂ ಗೊತ್ತಾಗದ ಹೂಮಕ್ಕ ನೆಗಾಡುವ ನೆಗೆಗೂ ಇರುವ ವ್ಯತ್ಯಾಸ ನೀವುಗೆ ಗೊತ್ತಿರ್ದು. ಆದರೆ ನಾವು ದೊಡ್ಡೊವುಕೆ ಈಗ ಅಂತ ನೆಗೆನ

ನೆಗಾಡಿಕಾದುಲೆ. ನಮ್ಮ ನೆಗೆಗೆ ಒಂದು ಕಾರಣ ಇದ್ದದೆ. (ಕಾರಣ ಇಲ್ಲದೆ ನೆಗಾಡುವವೂ ಒಳೊ ಇಲ್ಲೆಂತಲ್ಲ) ಆದರೆ ಹುಟ್ಟಿ ಕೆಲೊವು ದಿನನೋ, ತಿಂಗನೋ ಆದ ಕೂಸು ನಿದ್ದೆಲಿನೂ ನೆಗಾಡ್ದೆಲೆ – ಅದ್ ಯಾಕೆಂತೇಳುದೇ ನಂಗೆ ಬಾರಿ ಸೋಜಿಗದ ಸಂಗತಿ. ದೊಡ್ಡವು ಅದ್ಕೊಂದು ಕತೆನೂ ಹೇಳ್ತಿದ್ದೊ. ಆದರೆ, ಮಕ್ಕಳ ನೆಗೆನ ಹಿಂದೆ, ನಾವು ನಮ್ಮ ಬೊದ್ಕ್‌ಲಿ ನೆಗಾಡಿಕನ ಇದ್ದಂತ ಬಾವನೆಗ ಇರಿಕಿಲೆಂತ ನನ್ನ ನಂಬಿಕೆ. ಆದರೆ ಯಾರ ಮನ್ಸಿಗೂ ಬೇನೆ ಆಗದಾಂಗೆ ಕುಸಿಲಿ ನೆಗಾಡುವ ನಗೆ ಒಳ್ಳೆ ನೆಗೆಂತೇಳಿಕೆ ಅಡ್ಡಿ ಇಲ್ಲೆಂತ ಕಂಡದೆ. ನಾವು ಬೊದ್ಕಿಕನ ನಾವುಗೆ ಬೇರೆ ಬೇರೆ ಸಂದರ್ಬಲಿ ಎಷ್ಟೊಂದು ಕಷ್ಟಗ ಬಾದುಲೆ ಹೇಳಿ. ಆಗೆಲ್ಲ ಎಲ್ಲೊವುಕೂ ಬೇಜಾರಾದೆ. ಆದರೆ ಆಗನೂ ನಾವು ಒಂದು ಸಣ್ಣ ನೆಗೆ ಇಸಿಕಣಕಾದೆ. ಹೀಂಗೆ ಕಷ್ಟ ಇರಿಕನ ನೆಗಾಡಿಕೆ ಸಾಧ್ಯ ಆದು. ಆ ಕಷ್ಟಕ್ಕೊ ನೀವುಗೂ ಒಂದು ದೂರ ಇಸಿಕಂಬಕನ ಮಾತ್ರ. ನೀವು ಆ ಕಷ್ಟಲಿ ಮುಳ್‌ಗಿ ಹೋದರೆ ಆದುಲೆ. ತಾವರೆ ಎಲೆ ಮೇಲೆನ ನೀರ್‌ನ ಹಾಂಗೆಂತ ಹೇಳುವೆಲೆ? ನೀರ್‌ನ ಮೇಲೆ ಇದ್ದೂ ಚೆಂಡಿಯಾಗದೆ ಇರುವ ತಾವರೆ ಎಲೆನಾಂಗೆ, ಕಷ್ಟಗಳ ನಡುಲಿದ್ದೂ, ಅದ್ಕೂ ನಾವುಗೂ ಒಂದು ಅಂತರ ಇಸಿಕಂಡ್ ಗೇನ ಮಾಡಿನೋಡಿ. ಕಷ್ಟಂದ ಬುಡ್ಸಿಕಂಬ ದಾರಿ ತಾನಾಗಿ ಕಂಡದೆ. ಕಷ್ಟಲಿ ಮುಳ್‌ಗಿಯೇ ಹೋದರೆ ಬರೀ ದಿಕ್ಕ್ ತಪ್ಪಿದಾಂಗಾದೆ ಅಷ್ಟೆ. ಅದ್ ಆಕೆ ಬೊತ್ತ್. ಬೊದ್ಕ್‌ಲಿ ಎಲ್ಲಿಂದ ಪೆಟ್ಟ್ ಬಿದ್ದದೆಂತನೇ ಗೊತ್ತಾದುಲೆ. ಎತ್ತಂದಳೋ ಪೆಟ್ಟ್ ಬಿದ್ದ ಮೇಲೆನೆ ಗೊತ್ತಾದು. ನಮ್ಮ ಸುತ್ತ ನೆಗಾಡಿಕಂಡೇ ಇದ್ದವೆ ಜೆನ. ನಾವು, ಓ ನೆಗಾಡಿಕಂಡೊಳೊಂತ ತಿಳ್ಕಂಡ್ರೆ. ಅವು ಗೊತ್ತೇ ಆಗದಾಂಗ ನಮ್ಮ ಕೊಯ್ಕಂಡಿದ್ದವೆ. ಯಾಗ ಯಾರ್ ಎತ್ತಂದ ಯಾದರ್ಲಿ ಹೇಂಗೆ ಕೊಯ್ದುವೆಂತ ಗೊತ್ತೇ ಆದುಲೆ. ಹಾಂಗೆನೇ ಕಾಸುದು ಬೇಸುದು ಹುಟ್ಟಿದಲ್ಲಿಂದ ಸಾಯಕನ ಮುಟ್ಟ ಬೊದ್ಕ್ ತಾನೆ?... ಯಾಗೊಳೂ ಎಲ್ಲನೂ ಸರಿ ಇರುದುಂತ ಹೇಂಗೆ ಹೇಳಿಕೆ ಸಾಧ್ಯ ಹೇಳಿ? ಹಾಂಗೆಂತ ನಾವು ಯಾಗೋಳು ಒಂದೇ ಸಮ ಇರೊಕರೆ ಅದೂ ಹೇಂಗೆ ಸಾದ್ಯ ಹೇಳಿ. ಆದರೆ ಹೊತ್ತ್ ನೆತ್ತಿಗೇರಿಕನ ತಲೆ ಸುಡುವ ಅಂತಾ ಸೂರ್ಯದೇವ್ರು ಕೂಡ ಬೊಳ್ಪಿಗೆ ಹಿಂಬೊತ್ತ್ ಕೆಂಪಾಗಿ ತಂಪಾಗಿ ದಾಟಿಹೋದವೆ! ಬಾಳುವೆಲಿ ಮೊಯಿಂಸರ್ ನಾವೇಕೆ ಹಾಂಗಿರಿಕಾಗದ್? ಹಾಂಗಾಗಿ ನಮ್ಮ ಬೊದ್ಕ್‌ನ ಹಾಡವಲೆಗ ನೂರಾರ್. ಅದು ಯಾಗೊಳೂ

ಮುಗಿಯಕಿಲೆ. ತಲೆ ಇದ್ದಷ್ಟ್ ದಿನ ತಲೆಬೇನೆ ತಪ್ಪುದುಲೆಂತೇಳ್ದಾಂಗೆ. ಮಂಗ್ಳೂರು ಮಲ್ಲಿಗೆ ಹೂವುನ ನೋಡಿ. ಎಷ್ಟೇ ಕಟ್ಟಿ, ಸುತ್ತಿ, ಮುಚ್ಚಿಸಿ – ಹಂಞಾರ್ ಅದರ ಗಮನ ಹೆಂಗೋ ಹೊರ್ಟ್ ಹೊರೆಗೆ ಬಂದೇ ಬಂದದೆ. ಹಾಂಗೆ ಕಷ್ಟಗ ನಮ್ಮ ಕಟ್ಟಿ ಕಟ್ಟಿ ಮುಚ್ಚಿಸಿರೂ, ನಮ್ಮ ಮನ್ಸ್ ನೊಳೆಗೆಂದ ನೆಗೆ ಹಂಞಾರ್ ಹೊರೆಗೆ ಬಂದೇ ಬರೊಕು. ನಾವ್ಗಾಗಿನೂ ಹೌದು, ನಮ್ಮ ಸುತ್ತ ಇರೊವುಕಾಗಿನೂ ಹೌದು. ಹಳ್ಳ ಹರ್‌ಪು ಕಟ್ಟುದು (ಅಂದರೆ ಹರಿವ ನೀರ್ ಕಮ್ಮಿಯಾಗಿ ಹೋದು), ಪಚ್ಚೆಕಾಡ್ ಬಾಡುದು, ಇಚ್ಛೆ ಇರದೆ ಇರುವಂಥ ಮನಸ್ಥಿತಿ ಇರುದು – ಇದೆಲ್ಲ ನಮ್ಮ ಬೊದ್ಕ್ ಲಿ ಒಂದಲ್ಲಾ ಒಂದು ಕಾಲಲಿ ಎಲ್ಲೊವುಕೂ ಬಾವ ಸ್ತಿತಿನೇ. ನಾವುಗೆ ಇಚ್ಛೆ ಇಲ್ಲದಿರಿಕನನೂ ನಮ್ಮ ತುಟಿ ಮೇಲೆ ಒಂದು ಸಣ್ಣ ನೆಗೆ ಇದ್ದರೆ ಅದರ ಗುಣನೇ ಬೇರೆ. ನಿಜ, ಇಚ್ಛೆ ಇರದಿರಕನ ನೆಗಾಡುದು ಕಷ್ಟನೇ. ಆದರೂ ಹಾಂಗೊಂದು ವ್ಯಕ್ತಿತ್ವನ ನಾವು ಬೆಳಸಿಕಣೊಕುಂತೇಳುದು ನಮ್ಮ ಬೊದ್ಕ್‌ಗೆ ಅಗತ್ಯಂತೇಳ್ದರ್ಲಿ ಸಂದೇಹ ಇಲ್ಲೆಂತ ಕಂಡದೆ. ಡ್ರೈವಿಂಗ್ ಮಾಡಿಕನ ಮೋರೆ ಬಿಗ್ದ್ ಕುದ್ದುರುವ ಬದ್‌ಲ್‌ಗೆ ನಮ್ಮ ತುಟಿ ಮೇಲೆ ಒಂದು ಸಣ್ಣ ನೆಗೆ ಇದ್ದರೆ, ಎದ್‌ರ್‌ಂದ ಬಾಂವ, ನಾವು ಏನಾರೊಂದು ಸಣ್ಣ ತಪ್ಪು ಮಾಡಿರೂ ಕೋಪ ಮಾಡಿಕಂಬೊದುಲೆ. ಅಂವ ತಪ್ಪು ಮಾಡಿಕನೂ ಸಣ್ಣದೊಂದು ನೆಗೆ ನಮ್ಮ ತುಟಿಲಿ ಇರೊಕು. ಎಷ್ಟೇ ಹೇಳಿ. ನಮ್ಮ ಬೊದ್ಕ್ ನಮ್ಮ ಕೈಲಿನೂ ಇಲ್ಲೆ. ನಮ್ಮ ಇಚ್ಚೆನಾಂಗೆ ಆವಂತದೂ ಅಲ್ಲ. ಹೀಂಗಿದ್ದಮೇಲೆ ನಾವುಗೆ ಬೇಕಾಕನ ಬರ್ಸಿಕಂಡರೆ ಬೊದ್ಕ್‌ನ ಸಂಕಟನ ಹಂಞ ಕಮ್ಮಿ ಮಾಡಿಕಣಕ್. ಹಾಂಗಾಗಿ ಎಂತ ಕಷ್ಟ ಕಾಲಲಿನೂ ಸಣ್ಣದೊಂದು ನೆಗೆ ಮರಿಬಡಿ. ನೆಗೆ ಬಗ್ಗೆ ಇಷ್ಟೆಲ್ಲ ಹೇಳುವ ನಂಗೆ ನನ್ನ ಹೆಣ್ಣ್ ಮಾತ್ರ ನೀ ಬೆರೀ ಸಿಡ್ಕಂತ (ಸಣ್ಣ ವಿಷಯಕೂ ಸಿಡಿ ಸಿಡಿ ಮಾಡುವವಂವ) ಟೀಕೆ ಮಾಡ್ದೆ. ಅದೂ ನಿಜನೆ. ಎಲ್ಲವರೊಟ್ಟಿಗೆ ನೆಗಾಡಿ ಮಾತಾಡುವ ನಾವುಗೆ, ನಮ್ಮ ಹೆಣ್ಣ್‌ನೊಟ್ಟಿಗೆ ಯಾಗೊಳೂ ಹೀಂಗೆ ಮಾತಾಡಿಕಂಡಿರಿಕಾದುಲೆಂತೇಳ್ದು ಗೇನಮಾಡಿ ನೋಡಕಾದ ವಿಷಯ. ಏಕೆಂತೇಳ್ರೆ ನಾವು ಎಲ್ಲವರೊಟ್ಟಿಗೆ ಬೊದ್ಕುದಕಿಂತ ಹೆಚ್ಚಿಗೆ ಹೊತ್ತು ಮನೆಲಿ ಬೊದ್ಕುವೆ ಅಲ್ಲ?

---

**ಡಾ. ಕರುಣಾಕರ ನಿಡಿಂಜಿ**
ಬಾಲಂಬಿ ಅಂಚೆ, ಮಡಿಕೇರಿ




# "ಸಾಹೇಬ್ರು ಬಂದವೆ..." ನಾ ಕಂಡಾಂಗೆ..!

ಹಾರಂಬಿ ಯತೀನ್ ವೆಂಕಪ್ಪ

ನಮಸ್ಕಾರ ಎಲ್ಲಾ ಹಿಂಗಾರ ಓದುಗ ನೆಂಟ್ರ್‌ಗಳಿಗೆ, ಹಂಗೆ ಅರೆಭಾಷೆ ಸಾಹಿತ್ಯಪ್ರಿಯರ್ಗೆ,

ನಾ ಇದೇ ಸುರುನ ಸರ್ತಿ ಒಂದ್ ಕಥೆ ಬರೆಯತೊಳೆ. ಇದ್ ನನ್ನ ಕತೆತ ಹೇಳುವ ಬದಲ್ ಒಂದು "ಪ್ರವಾಸ ಕಥನ"ತ ಹೇಳಕ್. ಇಲ್ಲರೆ ನಾ ಕಂಡ "ಅರೆಭಾಷೆ ರಂಗಶಿಬಿರ" ಹಂಗೆನೇ, "ರಂಗ ಪಯಣ" ತೇಳಿ ಕೂಡಾ ಈ ಸಣ್ಣಕತೆ ಅಥವಾ ನನ್ನ ಅನಿಸಿಕೆನ ಈ ಬರೆವಣಿಗೆ ರೂಪಲಿ ಬರ್ದಳೆ ತೇಳಿ ತಿಳ್ಕಣಿ. ಈಗ ನನ್ನ ಪರಿಚಯ ಇಲ್ಲದೆ ನೀವ್ಗೆ ಕತೆ ಓದಿಕೆ ಮನ್ನಾಕಿಲೆ ಅಲಾ..? ಸರಿ.. ನನ್ನ ಬಗ್ಗೆ ಸಣ್ಣದಾಗಿ ಹೇಳ್ನೆ ಕೇಳಿ...

ನಾ ಹಾರಂಬಿ ಯತೀನ್ ವೆಂಕಪ್ಪತೇಳಿ, ಹುಟ್ಟಿದ್ ಬೆಂಗ್ಳೂರ್ಲಿ. ಅದಾಗಿ ಆರ್ ವರ್ಷ ಕಳ್ದ್ ನನ್ನ ಊರಾದ ಮೇಲ್ಚೆಂಬು ಗ್ರಾಮಕ್ಕೆ ಬಂದದ್. ಪೊಪ್ಪ ಅರುಣೋದಯ ಕುಮಾರ್ ಹಾರಂಬಿ ಬೆಂಗ್ಳೂರ್ಲಿ ಕೆಲ್ಸಲಿದ್ದೊ, ಅಮ್ಮ ರೇಖಾ ಹಾರಂಬಿ. ನಾ ಕಾನೂನು ಪದವಿ ಮಾಡ್ದ ಮೇಲೆ, ಈಗ ಸದ್ಯಕ್ಕೆ ಮನೆಲೇ ತೋಟ ಕೆಲ್ಸ ಮಾಡಿಕಂಡ್ ಒಳೆ (ಲಾಯರ್ ಕೆಲ್ಸದ ಪ್ರಾಕ್ಟೀಸ್‌ಗೆ ಹೋಕೆ ಉದಾಸೀನ ಅಷ್ಟೆ). ಹಿಂಗೆಲ್ಲಾ ಇರ್ಕನ ನಾ ಕಲೆ, ಸಂಸ್ಕೃತಿ ತೇಳಿಕಂಡ್ ಇದೆಲ್ಲದರ ಬಗ್ಗೆ ಸ್ವಲ್ಪ ಕಲಿಯೊಮೊತ ಆಸೆಲಿ ಹಂಞ ನೃತ್ಯ ಮತ್ತೆ ಸಂಗೀತನ ಕಲ್ತೆ. ಅದರ್ಲಿಸ ಶಾಸ್ತ್ರೀಯ ನೃತ್ಯ ಭರತನಾಟ್ಯಲಿ ಸೀನಿಯರ್ ಪರೀಕ್ಷೆ ಮತ್ತೆ ಕರ್ನಾಟಕ ಶಾಸ್ತ್ರೀಯ ಸಂಗೀತಲಿ ಜೂನಿಯರ್ ಮಾಡಿ ಮುಗ್ಸ್ಯೊಳೆ. ಅದ್ರೊಟ್ಟಿಗೆ ನಂಗೆ ಕೆಲವ್ ಸಂಗೀತ ವಾದನಗಳ ಕೂಡಾ ನುಡ್ಸಿಕೆ ಬಂದದೆ. ಇದಿಷ್ಟ್ ನನ್ನ ಪರಿಚಯ.



ಮುಂದೆ ನನ್ನ ಕಥೆಲಿ ಇನ್ನೂ ಕೆಲವು ನನ್ನ ಬಗೆಗೆ ಹೇಳಿಕಂಡ್ ಹೋನೆ. ಸರಿ ನನ್ನ ಬಗ್ಗೆ ತಿಳ್ಸಿಕೆ ನಾ ಯಾರ್‌ತ ನೀವ್ಗೆ ಅನ್ಸಿರ್ದುರ್ ಅಲಾ.. ಇರ್ಲಿ ನನ್ನೊಟ್ಟಿಗೆ ಈ ಕಥೆಲಿ ಇನ್ನೂ ಹಲವರ ಪರಿಚಯ ಮಾಡಿಕೊಳೆ. ಹಂಗೆನೇ ನನ್ನ ಈ ಕಥೆಗೆ ನಾ ಹೆಸರ್ ಇಸಿಕಂಡದ್.. "ಸಾಹೇಬ್ರು ಬಂದವೆ..." ನಾ ಕಂಡಾಂಗೆ..!

**ಸಿಹಿ ಕಹಿ ನೆನ್ಪು**

2019ನೇ ಇಸ್ವಿ ಡಿಸೆಂಬರ್‌ಲಿ ಪೊಪ್ಪ ಬೊಳ್ಪಿಗೆ ಸುದ್ದಿಬಿಡುಗಡೆ ಪೇಪರ್‌ನ ಓದಿಕಂಡ್ ಕುದ್ದುಕಂಡ್ ಇದ್ದವ್ ಒಮ್ಮೆಗೆ ಎದ್ದ್ ಕಾಫಿ ಕುಡ್ಕಂಡಿದ್ದ ನನ್ನಕ್ಕಲೆ ಬಂದ್ "ಮಂಜ ಇಲ್ಲಿ ನೋಡ್.. ಸುದ್ದಿಲಿ ಅರೆಭಾಷೆ ಅಕಾಡೆಮಿಯವ್ರದ್ ಒಂದು ಜಾಹಿರಾತು ಬಂದುಟು. ಅದ್ರಲಿ ಬರ್ದೊಳೊ... ಅರೆಭಾಷೆ ನಾಟಕ ಹೇಳಿಕೊಟ್ಟವೆ ಆಸಕ್ತಿ ಇದ್ದವ್ ಬಂದ್ ಸೇರಿಕಣಿತ. ನೀನೂ ಮೊನ್ನೆಂದ ಬೊಬ್ಬೆ ಹಾಕ್ತಾ ಇದ್ದಲಾ ನಾಟಕ ಅಭ್ಯಾಸ ಮಾಡೊಕುತ... ಅದ್ಕೆ ನೀ ಇದ್ಕೆ ಹೋಗಿ ಸೇರಿಕಂಬೊದು ಒಳ್ಳೆದ್"ತ ಹೇಳ್ದೊ. ಪೊಪ್ಪ ಹೇಳ್ದೇ ಹೇಳ್ದ್ ನಾ ಕೂಡ್ಲೆ ಅಕಾಡೆಮಿಗೆ ಒಂದು ಫೋನ್ ಮಾಡ್ದೆ. ಮತ್ತೆ ಫೋನ್‌ಲೇ ಈ ನಾಟಕ ಅಭ್ಯಾಸಕ್ಕೆ ಅಪ್ಲೈ ಮಾಡಿಕೆ ಏನಾರ್ ಉಟ್ಟಾ..? ಅಂತ ಕೇಳಿ ನಂಗೆ ಎಲ್.ಕೆ.ಜಿಂದ ಅಂತಿಮ ವರ್ಷದ ಡಿಗ್ರಿವರೆಗೆ ಸಿಕ್ಕಿದ ಎಲ್ಲಾ ಸರ್ಟಿಫಿಕೇಟ್‌ಗಳ ಹಿಡ್ಕಂಡ್ ಹೊರ್ಟೆ. ಮನ್ಸ್‌ಲಿಏನೋ ಒಂಥರಾ ಹೆದ್ರಿಕೆನೊಟ್ಟಿಗೆ ಎದ್ರ್ ಬಂದ್ ನಿತ್ತ ಬಸ್‌ಗೆ ಹತ್ತಿ ಕುದ್ದೆ.

ನಾ ಸಣ್ಣಂವ ಇರ್ಕನ ಶಾಲೆಲಿ ನಡೆವ ಪ್ರತಿಭಾಕಾರಂಜಿಲೆಲ್ಲಾ ನನ್ನ ಒಬ್ಬನೆ ಭಾಗವಹಿಸ್ವಂತ ಸ್ಪರ್ಧೆಗೆಕರ್ಕಣ್‌ತಿದ್ದೊ. ಆದ್ರೆ ಕೂಟಲಿ ಮಾಡ್‌ಕನ ಸೇರ್ಸಿಕಂಡದ್‌ಕಮ್ಮಿ. ನಾ ಐದ್ನೇ ಕ್ಲಾಸ್‌ಲಿ ಇರ್ಕನ "ಹಲಗಲಿಯ ಬೇಡರು" ತೇಳುವ ಒಂದು ಪಾಠ ನಮ್ಮ ಪುಸ್ತಕಲಿ ಇತ್ತ್. ಅದರ ನಾಟಕನೂ ಮಾಡಿದ್ದೊ. ಅದ್ರಲ್ಲಿ ಬ್ರಿಟಿಷ್ ಅಧಿಕಾರಿ ನಾ ಆಗಿದ್ದೆ. ಮತ್ತೆ ನಂಗೆ ನೆನ್ಪು ಇದ್ದಾಂಗೆ ಕೆಲವೊಂದು ನಾಟಕಗಳಿಗೆ ವೇದಿಕೆಲಿ ಕರೆಲಿ ನಿಲ್ಲಿಕೆ ಜನ ಬೇಕು ತೇಳಿ ನನ್ನ ಕರಿತಿದ್ದೊ.

ನಾ ಭರತನಾಟ್ಯಲಿ ಯಾಗೋಳು ಮುಖ್ಯ ಪಾತ್ರ ಅಥವಾ ರಾಕ್ಷಸ ಪಾತ್ರ ಮಾಡ್ತಾ ಇದ್ದರೂ ನಾಟಕಲಿ ನಂಗೆ ಯಾವುದಾದ್ರೂ ಒಂದು ಪಾತ್ರ ಮಾಡೊಕುತ ಏನೋ ಆಸೆ. ಹಂಗೆ ಹತ್ತನೇ ಇಯತ್‌ಲಿ ಇರ್ಕನ "ಮೂರ್ಖ ರಾಜ" ತೇಳೋ ನಾಟಕಲಿ ಒಂದು ಪಾತ್ರ ಸಿಕ್ಕಿತ್ತ್. ಅದ್

ನೆಗಾಡಿಕಂಡೇ ಡೈಲಾಗ್ ಹೇಳುವ ಪಾತ್ರ. ಅದ್ರಲಿ ನಂಗೆ ನಾ ಹೇಳುವ ಡೈಲಾಗ್‌ಂದ ನೆಗಾಡಿಕೆ ಇದ್ದದೇ ಜಾಸ್ತಿ. ಆಮೇಲೆ ನಂಗೆ ಪದವಿ ವಿದ್ಯಾಭ್ಯಾಸ ಮುಗೆಕನ ಮುಟ್ಟ ಯಾವ ನಾಟಕಕೂ ಸೇರಿತ್ಲೆ. ಮತ್ತೆ ಪದವಿ ಮುಗ್ದ ಮೇಲೆ ಒಂದು ಸಲ ಒಂದು ನಾಟಕ ತಂಡದವರೊಟ್ಟಿಗೆ ಕೇಳ್ದೆ. "ನಾನೂ ಸೇರಕ ನಿಮ್ಮೊಟ್ಟಿಗೆ... ನಂಗೆ ನಾಟಕ ತೇಳ್ರೆ ಬಾರೀ ಇಷ್ಟ. ನಾ ಭರತನಾಟ್ಯಲಿ ಸೀನಿಯರ್ ಕೂಡಾ ಮಾಡ್ಯೊಳೆ. ಯಾವ ಪಾತ್ರ ಆದರೂ ಆದು ನನ್ನ ಸೇರ್ಸಿಕಣಿ ಅಣ್ಣಾ.."ತ ಆಕನ ಅವು "ನಿಂಗೆಲ್ಲ ನಾಟಕ ಆಗಿಬಾದುಲೆಯ, ಅದ್ಕೆ ನೀ ನಮ್ಮೊಟ್ಟಿಗೆ ರಾತ್ರೆ ಎಷ್ಟೊತ್ತಾದರೂ ಪ್ರಾಕ್ಟಿಸ್ ಮಾಡೊಕು. ನೋಡ... ಈಗ ಜನ ಒಳೊ. ಬೇಕಾಕನ ನಾ ಸೇರ್ಸಿಕಣೆ" ಅಂತ ಹೇಳ್ದವು ಮತ್ತೆ ಸುದ್ದಿನೇ ಇತ್ಲೆ. ಆದರೂ ನಂಗೆ ನಾಟಕ ಕಲಿಯೊಕು ತೇಳುವ ಹಂಬಲ, ಉತ್ಸಾಹ ಕಮ್ಮಿ ಆಗಿತ್ಲೆ.

ಇದೆಲ್ಲ ಆಗಿ ಒಂದೆರಡ್ ತಿಂಗಳ್ಲಿ, ಪೊಪ್ಪ ಹೇಳಿದ್ದೊ ಅಲಾ ಆ ನಾಟಕ ಉತ್ಸಾಹಿಗಳ್ಲಿ ನಾನೂ ಒಂದಾಕುತ ಜಾಹಿರಾತು ನೋಡಿಕಂಡ್ ಅದ್ಕೆ ಅಪ್ಲೈ ಮಾಡಿಕೆ ಹೋಗ್ತಾ ಇರುವ ನಂಗೆ "ಅಯ್ಯೋ ಅಲ್ಲಿ ಎಷ್ಟ್ ಕ್ಯೂ ಇರುವೊಲಾ"ತ ನೆನ್ಸಿಕಾಕನ ಕಂಡಕ್ಟರ್ ಜೋರುಲಿ "ಟೋಲ್‌ಗೇಟ್.. ಟೋಲ್‌ಗೇಟ್..." ತೇಳಿ ಕರೆಕನ ಎಚ್ಚರ ಆತ್.ನಾ ಬಸ್ಸ್‌ಂದ ಇಳ್ದ್ ಏನೋ ಖುಷಿಲಿ ನಡ್ಕಂಡ್ ಹೋದೆ....ಅದೇ ನನ್ನ ಕನ್ಸ್‌ಗಳಿಗೆ ಇನ್ನೇನ್ ಬಣ್ಣ ಹಚ್ಚಿ ವೇದಿಕೆಲಿ ಹೆಮ್ಮೆಲಿ ನಾಟಕ ಮಾಡೊಕು ತೇಳುವ ಆಸೆಲಿ. ಮಡಿಕೇರಿಲಿ ಇರ್‌ವ ಅಕಾಡೆಮಿ ಕಛೇರಿಗೆ ಹೋಗಿ ನಾಟಕಕ್ಕೆ ಹೆಸ್ರ್ ಕೊಟ್ಟ್ ಬಂದೆ. ಮೊನ್ಸ್‌ಲಿ ಒಂಥರ ಹೆದ್ರಿಕೆ ಇದ್ದೇ ಇತ್ತ್. ನಾ ಸೆಲೆಕ್ಟ್ ಆದನೆನ ಇಲ್ಲೆನತ. ಅಲ್ಲಿಂದ ಸೀದಾ ಬಸ್ ಹತ್ತಿ ಮನೆಗೆ ಬಂದೆ. ಮಧ್ಯಾಹ್ನ ಉಂಡ್ ಮಲ್ಗಿರ್ಕನ ಒಂದ್ ಪೋನ್ ಬಾತ್. ಅತ್ತಂದ ಮಾತಾಡ್ದವ್..''ನಮಸ್ತೆ ನಾ ಲಕ್ಷ್ಮೀನಾರಾಯಣ ಕಜೆಗದ್ದೆ ತೇಳಿ, ಅರೆಭಾಷೆ ಅಕಾಡೆಮಿನ ಅಧ್ಯಕ್ಷ" ತೇಳಿ ಹೇಳ್ದೊ. ಅರೆಮರೆ ನಿದ್ದೆಲಿದ್ದ ನಂಗೆ ಪುನಾಃ ಶಾಕ್ ಆಗಿ ಎದ್ದ್ ಕುದ್ದೆ.

**ಸುರೂನ ಭೇಟಿ**

ನಂಗೆ ಅವರ ಮೆತ್ತನೆ ಸೊರನ ಕೇಳಿ ಆಶ್ಚರ್ಯ ಆತ್. ಯಾಕೆತೇಳ್ರೆ ಅವ್ಕೆ ನಾ ಗೊತ್ತೊಳೆ ತೇಳುವಾಂಗೆ ಲಾಯ್ಕ್‌ಲಿ ಮಾತಾಡ್ದೊ. ಆಮೇಲೆ "ನೀವ್ಗೆ ಪೋನ್ ಮಾಡಿ ಯಾಗ ಸೇರೊಮೊತ ಹೇಳ್ನೆ. ಹಂಗೆನೇ ನೀವ್ಗೆ ಗೊತ್ತಿರುವ ಬೇರೆ ಗೂಡೆ, ಹೈದಂಗ ಇದ್ದರೆ ಅವ್ಕೂ ನಾಟಕದ ಬಗ್ಗೆ ತಿಳ್ಸಿ.

ಅವ್ಕೂ ರಂಗಮನೆಲಿ ಸೇರಿಕೆ ಬನ್ನಿಂತ ಹೇಳಿ.. ಈ ಸುದ್ದಿನ ಮುಟ್ಟುಸಿ. ಹಾಂಗೇ ಬಾಕಾಕನ ಯಾವ್ದಾರ್ ಡೈಲಾಗ್, ನಿಮ್ಮ ಆಸಕ್ತಿ ವಿಷಯಗಳ ಬಗ್ಗೆ ನೋಡಿಕಂಡ್ ಬನ್ನಿ.. ಸಂದರ್ಶನ ಇದ್ದದೆ"ತ ಹೇಳ್ದೊ.

ನಾನೂ ಆದುತ ಹೇಳಿ ನನ್ನ ಕೆಲವ್ ಜೋಸ್ತಿಗಳಿಗೆ "ಆಸಕ್ತಿ ಇದ್ದವ್ ಬರಕಡ"ತ ಹೇಳ್ದೆ. ಅದಾಗಿ ಎರ್ಡ್ ದಿನ ಕಳ್ದ್ ಅಧ್ಯಕ್ಷರ್ ಪೋನ್ ಮಾಡಿ, "19 ಜನವರಿ (2020)ಗೆ ರಂಗಮನೆಲಿ ಸಂದರ್ಶನ ಕಾರ್ಯಕ್ರಮ ಉಟ್ಟು ಬನ್ನಿ"ತ ಹೇಳ್ದೊ.

ಅಂತೂ ಆ ದಿನ ಬಾತ್. ಅಂದ್ ಅಧ್ಯಕ್ಷರ್ ಪೋನ್ ಮಾಡ್ದಲ್ಲಿಂದ ಜನವರಿ 19 ಮುಟ್ಟ ಒಂದು ಏಕಪಾತ್ರಭಿನಯನ ಹುಚ್ಚು ಕಟ್ಟಿಕಂಡ್ ಪ್ರಾಕ್ಟಿಸ್ ಮಾಡ್ಯೊಳೆ. ನಾ ಹೆಂಗಾರ್ ಅಧ್ಯಕ್ಷರ್ನ ಹಂಗೇ ನಾಟಕ ನಿರ್ದೇಶಕರಾಗಿರೋ ರಂಗಮಾಂತ್ರಿಕ ಜೀವನ್ ರಾಂ ಸುಳ್ಯ ಅವರಿಬ್ಬರ ಮೆಚ್ಚಿಸೊಕುತ ಪಟ್ಟ್ ಹಿಡ್ದ್ ಪ್ರಾಕ್ಟಿಸ್ ಮಾಡಿದ್ದೆ. "ಅದ್ ನಾ ಸಣ್ಣದಿರ್‌ಕಾಕನ ನನ್ನ ಚಿಕ್ಕಪ್ಪ ಹಾರಂಬಿ ರವಿಕುಮಾರ್‌ಯುವಜನಮೇಳಕ್ಕೆಲ್ಲಾ ಹೋಗ್ತಿದ್ದೊ. ಆಗ ಅವ್'ಎಚ್ಚಮ್ಮ ನಾಯಕ'ನ ಏಕಪಾತ್ರಾಭಿನಯ ಮಾಡಿ ಪ್ರೈಸ್ ಗೆಲ್ತಿದ್ದೊ. ಅದರ ನಾ ಅವರ್‌ಂದ ನೋಡಿ ಕಲ್ತಿದ್ದೆ". ಸರಿ ತೇಳಿಬುಟ್ಟು ಮನೆಂದ ಸುಳ್ಯಕ್ಕೆ ಹೊರ್ಟೆ. ಹೋಕಾನ ಕೂಡಾ ಬಾಯಿಪಾಠ ಮಾಡಿಕಂಡೇ ಹೋದೆ. ಸುಳ್ಯಕ್ಕೆ ಎತ್ತಿ ರಂಗಮನೆಗೆ ಹೋಗುವ ದಾರಿ ಹಳೆಗೇಟ್ ಹಕ್ಕಲೆ ಬೈಕ್‌ನ ತಿರ್ಗ್‌ಸಿದೆ. ಮನ್ಸ್‌ಲಿ ಏನೋ ಒಂಥರಾ ಭಯದ ಖುಷಿ. ಎದೆ ಜೋರುಲಿ ಬಡ್ಕಂಡಿತ್ತ್. ಪೇಪರ್‌ಲಿ ಇಲ್ಲಾ ಕೆಲವೊಂದು ಸಂದರ್ಶನ ವೀಡಿಯೋಲಿ ಮಾತ್ರ ನಾ ಜೀವನ್ ಸರ್‌ನ ನೋಡಿದ್ದೆ. ಆದರೆ ಸುರೂನ ಸರ್ತಿ ಅವರ ನೋಡಿಕೆತ ಹೋಗ್ತಾ ಒಳೆ... ನನ್ನ ಯಾವ ರೀತಿ ಮಾತಾಡ್ಸುವೊ? ಹೆಂಗೆ ಕರ್‌ಕಂಬೊತ ಯೋಚನೆ ಮಾಡ್ಕನ ರಂಗಮನೆ ಎದೂರಿಗೆ ಎತ್ತಿದೆ.

ಶಿಬಿರಕ್ಕೆ ಸೇರಿಕೆ ಬಂದದರ್ಲಿ ಒಬ್ಬ ನಂಗೆ ಪರಿಚಯ ಇತ್ತ್. ಉಳ್ದವರ್ದ್ ಪೂರಾ ಹೊಸ್ತೊಸ್ತು ಮೋರೆ. ಎಲ್ಲವ್ಕೂ ಒಂದು ಸಣ್ಣ ನಗೆ ಕೊಟ್ಟು ರಂಗಮನೆನ ಕುಟೀರದ ಒಳಗೆ ಹೋದೆ. ಅಷ್ಟಾಕನ ಸರ್ ಬಂದೊ... ಅಧ್ಯಕ್ಷರ ಮಾತಾಡಿಕೆ ಹೇಳ್ದೊ. ಅಧ್ಯಕ್ಷರ್ ನಾಟಕ ವಿಭಾಗನೇ ಯಾಕೆ ತಕಂಡೊತ ಹೇಳಿಕೆ ಸುರು ಮಾಡ್ದೊ. ಅರೆಭಾಷೆ ಅಕಾಡೆಮಿ ಒಳದ್ ಅರೆಭಾಷೆಗೆ ಸಂಬಂಧಿಸಿದ ಕೆಲ್ಸನ ಮಾಡಿಕೆ. "ಅರೆಭಾಷೆ ಸಾಹಿತ್ಯ, ಸಂಸ್ಕೃತಿನ ಉಳ್ಸಿಕಂಡ್ ಬೆಳ್ಸಕುತ ಇದ್ದರೆ ಬರೇ ಒಂದೆರಡ್ ದಿನ ಹಬ್ಬ, ಕೊಣ್ತ, ಸ್ಪರ್ಧೆ ಇತ್ಯಾದಿಗಳ ಮಾಡ್ದಲ್ಲದೇ, ಒಟ್ಟಿಗೇ... ಅರೆಭಾಷೆಗಿರುವ

ಜೀವಂತಿಕೆನ ಮುಂದಿನ ಪೀಳಿಗೆಗೆ ಉಳ್ಸೊಕುಂತಾದ್ರೆ, ಪುಸ್ತಕ ಅಥವಾ ಸಾಹಿತ್ಯ ರೂಪಲಿ ಇರೊಕು. ಅದೇ ರೀತಿಲಿ ನಾವು ನಾಟಕನ ಸಹ ಶಿಸ್ತುಬದ್ಧ ರೀತಿಲಿ ಅರೆಬಾಸೆ ವಾಕ್ಯಗಳ ಜೋಡ್ಸಿ ಒಂದು ಅರ್ಥಪೂರ್ಣ ನಾಟಕನ ಮಾಡ್ರೆ ಅರೆಬಾಸೆನ ಸೊಗಡ್ ಎಲ್ಲವ್ನೂ ಹರ್ಡ್ಸಿದೆ.ಹಂಗೇ ನಾಟಕ ಪ್ರದರ್ಶನನ ಬೇರೆ ಬೇರೆ ಊರುಲಿ ಮಾಡ್ಕನ ನಮ್ಮ ಭಾಷೆನ ಪರಿಚಯ ಅಲ್ಲಿನ ಜನಂಗಳಿಗೂ ಆದೆ. ಇದೇ ಈ ನಾಟಕನ ಉದ್ದೇಶನೂ ಹೌದು"ತ ಹೇಳ್ದೊ. ಮತ್ತೆ ಅಧ್ಯಕ್ಷರ ಮಾತ್ ಮುಗ್ದಾಂಗೆ ಜೀವನ್ ಸರ್ ಮಾತಾಡ್ದೊ. ರಂಗಮಾಂತ್ರಿಕ, ರಂಗದಶಾವತಾರಿ ಇನ್ನು ಎಷ್ಟೋ ಬಿರುದು ಇರುವ ಅವು ಮಾತಾಡ್ದರ ಕೇಳೊಕು ತೇಳುವ ಬಯ್ಕೆ ಆ ದಿನ ನಂಗೆ ನೆರವೇರ್ತ್. ಅವರ ಬಗ್ಗೆ ನಾ ಜಾಸ್ತಿ ಹೇಳಿಕೆ ಆದುಲೆ. ಯಾಕೆ ತೇಳ್ರೆ, ನಾ ಎಷ್ಟು ಹೇಳ್ರೂ ಅದ್ ಕಮ್ಮಿನೇಆದೆ. ಹಂಗೂ ನೀವ್ಗೆ ತಿಳ್ಕಣೊಕುತ ಇದ್ದರೆ ಹಿಂದಿನ "ಹಿಂಗಾರ" ಸಂಚಿಕೆಗಳ್ಲಿ ಅವರ ಬಗ್ಗೆ ಬಂದ "ವ್ಯಕ್ತಿಪರಿಚಯ" ಅಂಕಣನ ಒಮ್ಮೆ ಬುಡ್ಸಿ ಓದಿಕಣಿ.

ನಂಗೆ ಅವು ಮಾತ್ ನಿಲ್ಸಿದ ಮೇಲೆ, ನಮ್ಮ ನಮ್ಮ ಪರಿಚಯನ ಮಾಡಿಕಣಿಕೆ ಹೇಳ್ದೊ. ಆಗ ನಾಟಕಕ್ಕೆ ಸೇರಿಕೆ ತೇಳಿ, ಸರ್‌ನ ಹಳೇ ವಿದ್ಯಾರ್ಥಿಯೊಬ್ಬ ಇದ್ದೊ. ನೀವ್ಗೆಲ್ಲಾ ಮುಂದೆನೇ ಪರಿಚಯ ಇರುವ ವಿನೋದ್ ಮೂಡಗದ್ದೆ. ಅವರೊಟ್ಟಿಗೂ ಸಹ ನಂದ್ ಸುರೂನ ಭೇಟಿ ಆಗಿತ್ತ್. ಅವು 'ಅರೆಭಾಷೆ ರಂಗಭೂಮಿ' ತೇಳುವ ವಾಟ್ಸಾಪ್ ಗ್ರೂಪ್ ಮಾಡಿ ನಮ್ಮೆಲ್ಲರ ಸೇರ್ಸಿಕಂಡೊ. ಮತ್ತೆ ಪುನಾಃ ನಾವೆಲ್ಲ ಒಟ್ಟಿಗೆ ಯಾಗ ಸೇರ್ದುತ ಆ ಗ್ರೂಪ್‌ಲೇ ತಿಳ್ಸುವೆತ ಹೇಳ್ದೊ. ಇದಾಗಿ ಐದ್ ದಿನಲಿ ಮೆಸೆಜ್ ಬಾತ್. ಫೆ.3ನೇ ತಾರೀಖು ಸಂಜೆ 6ಕ್ಕೆ "ಅರೆಭಾಷೆ ರಂಗಶಿಬಿರ ಉದ್ಘಾಟನೆ"ತೇಳಿ.

ಅಲ್ಲಿಂದ 48 ದಿನ ರಂಗಮನೆಲಿ ಶಿಬಿರಾರ್ಥಿಯಾಗಿ ಉಳ್ಕಣಿಕೆ ಬಟ್ಟೆ ಬರೆ ಪೂರಾ ಜೋಡ್ಸಿಕಂಡ್ ಫೆ.3ನೇ ದಿನಕ್ಕಾಗಿ ಕೊಡಿ ಕಾಲ್‌ಲಿ ಕಾದ್ ಕುದ್ದಿದ್ದೆ....

(ಮುಂದುವರೆಯುವುದು...)

---

**ಹಾರಂಬಿ ಯತೀನ್ ವೆಂಕಪ್ಪ**
ಹಾರಂಬಿ ಮನೆ, ಮೇಲ್ಚೆಂಬು ಗ್ರಾಮ, ಬಾಲಂಬಿ ಅಂಚೆ, ಮಡಿಕೇರಿ – 574234
ಫೋನ್ : 9945233656 ವಾಟ್ಸಪ್ : 7090329733




# ಲಂಚ

ಕುಂಞೇಟಿ ಶಿವರಾಮ ಗೌಡ



"ಆಸೆಯೇ ದುಕ್ಕಕ್ಕೆ ಮೂಲ" ಬುದ್ದ ಅಂದ್ ಹೇಳ್ದ ಮಾತ್ ಇಂದಿಗೂ ಪ್ರಸ್ತುತ ಆದೆ. ಪ್ರಪಂಚದ ಜನಗಳ ವ್ಯವಹಾರನ ನೋಡಿ ಅಂವ ಒಂದು ಸರ್ವ ಕಾಲದ ಸತ್ಯನ ಸರಳ ರೀತಿಲಿ ಸಾಮಾನ್ಯ ಜನಕ್ಕೆ ತಿಳ್ಸಿಹೇಳ್ತ್. ಈ ಮಾತಿನ ನಿಜವಾದ ಅರ್ತ ತಿಳಿಕೆ ದೊಡ್ಡ ಜ್ಞಾನಿಗೂ ಕಷ್ಟ. ಅದೇ ಮಾತಿನ ಹನಿಯ ಬದ್ಲಾಯಿಸಿ 'ಅತಿ ಆಸೆಯೇ ಲಂಚಕ್ಕೆ ಮೂಲಂತ' ನಾ ಕಂಡ್ ಕಂಡಳೆ.

ಲಂಚಂತ ಹೇಳ್ವ ಈ ಸಣ್ಣ ಪದ ಮಾಡ್ವ ಕಾರ್‌ಬಾರ್ ಮಾತ್ರ ಬಾರಿ ದೊಡ್ಡ ಪರಿಣಾಮ ನಮ್ಮ ಎದ್ರ್‌ಗೆ ಕಂಡದೆ. ಲಂಚನ ಕೊಡುದು ಮತ್ತೆ ತಕಂದು ಅಪರಾದಂತ ನಮ್ಮ ಕಾನೂನೇ ಹೇಳ್ದೆ. ಆದರೆ ಲಂಚ ತಕಂಡವ ಈವರೆಗೆ ಯಾರಿಗೂ ರಶೀದಿ ಕೊಟ್ಟತಿಲ್ಲೆ. ಆದ ಕಾರಣ ಲಂಚ ಕೊಡುದರ ಮತ್ತೆ ತಕಂದರ ಸಾಬೀತ್ ಮಾಡ್ಕೆ ಬಾರಿ ಕಷ್ಟ. ಎಲ್ಲೋ ಲಕ್ಷಕ್ಕೊಬ್ಬ ನಮ್ಮ ದೇಸಲಿ ಸಿಕ್ಷೆ ಅನುಭವಿಸಿದೆ.

ಲಂಚ ವಸ್ತು ರೂಪಲಿ, ಹಣದ ರೂಪಲಿ, ಬೆಳ್ಳಿ, ಬಂಗಾರದ ರೂಪಲಿ ಮಾತ್ರ ಅಲ್ಲ ಬೂಮಿ, ಮತ್ತೆ ಬೆಲೆ ಬಾಳ್ವ ವಸ್ತುಗಳ ರೀತಿಲೂ ಸಂದಾಯ ಆದೆ. ಲಂಚದ ವ್ಯವಹಾರ ಕಳ್ಳತನ, ಮೋಸದ ತರದ ಒಂದು ಅಪರಾಧ. ಬಾರಿ ಹಿಂದೆನ ಕಾಲಂದಲೇ ಲಂಚ ಬೇರೆ ಬೇರೆ ಹೆಸ್ರ್‌ಲಿ ನಡೆತಾ ಇತ್ತ್. ಲಂಚ ಕೊಡ್ದು ನಾವ್ಗೆ ಬೇಕಾದಂಗೆ ಲಾಬ ಆವ ರೀತಿಲಿ ಕಾನೂನು ಬಾಹಿರವಾಗಿ ಒಂದು ಉದ್ದೇಸ. ಕೆಲ್ಸನ ಪೂರೈಸ್‌ಕೆ ನಡೆವ ವ್ಯವಹಾರ. ಈ ಕೆಟ್ಟ ಚಾಳಿ ಬೆಳ್ದ್ ಬೆಳ್ದ್ ಇಂದ್ ಲಂಚ ಕೊಡದೆ ಯಾವ ಕೆಲ್ಸ ಕೂಡ ಮಾಡಿಕೆ ಸಾಧ್ಯ ಇಲ್ಲದ ಸ್ಥಿತಿಗೆ ಮುಟ್ಟಿಟು.

ಹಿಂದೆ ನಮ್ಮ ದೇಸದ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ವರದಿಗಾರ ಎದ್ರ್ ಮಾತಾಡ್‌ಕನ ಹೇಳ್ದ್ ಮಾತ್ ನೆಂಪು ಬಂದದೆ. ನಮ್ಮ ದೇಸಲಿ ಬ್ರಷ್ಟಾಚಾರ, ಹಂಞ ಹೆಚ್ಚಾಗ್ತ ವುಟ್ಟು ಇದ್‌ಕ್ಕೆ ನೀವು ಏನ್ ಹೇಳ್ರೆಂತ ಒಬ್ಬ ಪತ್ರಿಕಾ ವರದಿಗಾರ ಪ್ರಶ್ನೆ ಮಾಡ್ತ್. ಆಗ ಪ್ರದಾನಿ ಇಂದಿರಾಗಾಂಧಿ ಕೊಟ್ಟ ಉತ್ತರ 'ಬ್ರಷ್ಟಾಚಾರ, ಲಂಚ ಇದ್ ನಮ್ಮ ದೇಸಲಿ ಮಾತ್ರ ಅಲ್ಲ. ಅದೊಂದು ಗ್ಲೋಬಲ್ ಫೆನೋಮಿನಾಂತ'

ಸಮಜಾಯಿಸಿ ಕೊಟ್ಟೊ. ಸಾಮಾನ್ಯ ಜನಗಳೂ ಲಂಚ, ಬ್ರಷ್ಟಾಚಾರ ತಪ್ಪುಂತ ಒಪ್ಪುವೆ. ಆದರೆ ದೇಸದ ಪ್ರದಾನಿ ಬಾಯಿಂದ ಬಂದ ಮಾತ್ ಕೇಳಿ ನಂಗೆ ಬಾರಿ ದುಕ್ಕ ಆತ್. ಆಮೇಲೆ ಪ್ರದಾನಿ ಆಗಿದ್ದ ರಾಜೀವ್ ಗಾಂದಿ ನವು ಲಂಚದ ವಿಷಯಲ್ಲಿ ಹೇಳ್ದ್ ಮಾತ್ ಸತ್ಯಂತ ಕಂಡ್ ಬಂದದೆ ಸರಕಾರ ಒಂದು ರೂಪಾಯಿ ಅನುದಾನ ಕೊಟ್ರೆ, ಕೊನೆ ಜಾಗೆ ಮುಟ್ಟಕನ ಅಲ್ಲಿ ಕರ್ಚಾಗುವ ಹಣ ಬರಿ ಹದಿನೈದ್ ಪೈಸೆ ಮಾತ್ರ. ಹಂಗಾರೆ 85 ಪೈಸೆ ಮಧ್ಯ ದಾರಿಲಿ, ಎಲ್ಲವು ಪಾಲ್ ಹೊಡ್ದವೆಂತ ಇದರ ಅರ್ತ. ಈಗ ಲಂಚ ಸರ್ಕಾರದ ಮಟ್ಟಲಿ 'ಕಟ್ ಮನಿ' ರೂಪಲಿ ಶೇಕಡಾವಾರು ನಡೆತಾ ವುಟ್ಟು. ಎಂದರೆ ಪರಿಣಾಮ ಒಂದೇ, ಹೆಸ್ರ್ ಮಾತ್ರ ಬೇರೆ. ದಿನ ಹೋದಾಂಗೆ ಲಂಚ ಕೊಡ್ದರ್ಲಿ ತಕಂಬದರ್ಲಿ ಹೊಸ ಹೊಸ ಸಂಸೋದನೆಗ ನಡೆತಾ ಉಟ್ಟು.

ಲಂಚನ ನಿಲ್ಸಿಕೆ ಯಾಕೆ ಬೊತ್ತ್ಂತ ಪ್ರಶ್ನೆ ಮಾಡ್ರೆ ಎಲ್ಲವು ಹೇಳ್ವೆ ಸಾಧ್ಯ ವುಟ್ಟುಂತ. ಆದರೆ ಕಾರ್ಯರೂಪಲಿ ಲಂಚ ಇಂದ್ ನಮ್ಮ ಎದ್ರೇ ನಡೆತಾವುಟ್ಟು. ಅತಿ ಆಸೆಂದ ಹುಟ್ಟಿದ ಲಂಚದ ಈ ಪ್ರಕ್ರಿಯೆನ ತಡೆಕೆ ಪ್ರತಿ ಒಬ್ಬನೂ ಅಂವನ ಮನ್ಸಿಲಿ ನಿಶ್ಚಯ ಮಾಡೊಕು. ಆದರೆ ಇದ್ ಕಾರ್ಯರೂಪಕೆ ಬಾಕೆ ಬಾರಿ ಗಟ್ಟಿ ಮನ್ಸ್ ಬೇಕು. ಮದ್ಯಪಾನ ಮಾಡ್ರೆ ನಮ್ಮ ಆರೋಗ್ಯ ಹಾಳಾಗಿ ಕಾಯಿಲೆ ಬಂದದೆಂತ ಎಲ್ಲವೂ ಒಪ್ಪಿಕಂಡವೆ. ಆದರೆ ಆಚರಣೆ ಮಾಡ್ತುಲ್ಲೆ. ಯಾವುದೇ ಚಟಗಳ ಕಲೆಕೆ ಸಾಲೆ, ಮಾಸ್ಟ್ರ ಬೇಡ. ಅವೆಲ್ಲ ಗುರು ಇಲ್ಲದ ವಿದ್ಯೆಗ. ಒಳ್ಳೆ ಅಬ್ಬೆಸನ ಕಲೆಕಾದರೆ ನಿತ್ಯ ಪ್ರಯತ್ನ, ಪರಿಶ್ರಮ ಯಾಗೊಳು ಮಾಡೊಕು.

ಒಂದು ಉದಾರಣೆ ಮೂಲಕ ಹೇಳ್ರೆ ಲಂಚದ ವಿಸಯ ಇನ್ನೂ ಹೆಚ್ಚಿಗೆ ಅರ್ತ ಆದು. ನಾವು ದಾರಿಲಿ ನಡ್ಕಂಡ್ ಹೋಕನ ನೂರರ ಒಂದು ಪಚ್ಚೆ ನೋಟು ಬಿದ್ದದ್ ಕಂಡದೆ. ಆಗ ನಾವು ಒಮ್ಮೆ ಹಿಂದೆ ಮುಂದೆ ನೋಡಿ ಯಾರೂ ಕಾಂಬೊದಿಲ್ಲೆಂತ ಗಟ್ಟಿ ಮಾಡಿ ನೋಟ್‌ನ ಹೆರ್ಕಿ ಜೇಬಿಗೆ ಹಾಕಿ ಸಭ್ಯರಂಗೆ ಮುಂದೆ ಹೋದರೆ ಇದ್ ಒಂದು ರೀತಿನ ಸ್ವ ವಂಚನೆ ಮತ್ತೆ ಆಸೆನ ಮೂಲ.

ಯಾಗ ಇನ್ನೊಬ್ಬರ ವಸ್ತುಗ ಬೇಡಂತ ಮನ್ಸಿಲಿ ಕುದ್ದರೆ, ಎದ್ರ್ ರಾಸಿ ಚಿನ್ನ ಕಂಡರೂ ಅತ್ತ ಮನ್ಸ್ ಹೋಕಿಲ್ಲೆ. ಇದ್ ಸುಲಭ ಅಲ್ಲ. ಆದ್ರೂ ಎಲ್ಲವೂ ಮಾಡ್ವೆ. ಎಲ್ಲವೂ ಲಂಚ ತಕಂದವೆಂತ ವಾದ ಮಾಡಿ ನಾವು ಆದೇ ದಾರಿಲಿ ನಡ್ದರೆ ನಾವು ಅನ್ಯಾಯೆನ ಸಮರ್ಥನೆ ಮಾಡ್ದಂಗೆ ಆದೆ. ಲಂಚ ಗ್ಲೋಬಲ್ ಫೆನೋಮಿನ ಆದ್ರೂ ತಪ್ಪು, ತಪ್ಪೇ.

---

**ಕುಂಞೇಟಿ ಶಿವರಾಮ ಗೌಡ**
(ವ್ಯಾಸ) 8762121694

# ಆಟಕ್ಕೆ ಉಟ್ಟು ಲೆಕ್ಕಕ್ಕೆ ಇಲ್ಲೆ

●

**ಅನುಷಾ ಟಿ.ಹೆಚ್.**

ಎಲ್ಲವೊಕ್ಕು ನಮಸ್ಕಾರ:

ನಾ ನಿವ್‌ಗೆ ಒಂದು ವಿಷಯ ಹೇಳಿಕ್ಕೆ ಹೊರ್‌ಟೊಳೆ. ವಿಷಯ ತಾ ಹೇಳ್‌ದರೆ ತಪ್ಪಾದು. ವಿಷಯದ ಬಗ್ಗೆ ಕೆಲವು ಅಂಶಗಳ ಎಳೆಎಳೆಯಾಗಿ ಬುಡ್‌ಸಿ ಹೇಳೊಕ್ಕು ತಾ ಒಳೆ. 'ಆಟಕ್ಕೆ ಉಟ್ಟು ಲೆಕ್ಕಕ್ಕೆ ಇಲ್ಲೆ' ತಾ ಇದರ ನಾವು ಮನೇಲೀ ದೊಡ್ಡವು ಹೇಳ್‌ದರ ಕೇಳುವೆ. ಆದರೆ ಅದ್ ಯಾಕೆ ಆ ಮಾತ್ ಹೇಳುವೆ ಗೊತ್ತಾದುಲೇ. ಕೇಳಿಕ್ಕೆ ಹೋಕನ ನೀವ್ಗೆ ಯಾಕೆ ಅದೆಲ್ಲಾ ಅಧಿಕಪ್ರಸಂಗ ಪೂರಾತಾ ಜೋರು ಬ್ಯೊಗೊಳು ಸಿಕ್ಕಿದೆ. ಇವರ ಈ ಜೋರಿಗೆ ನಮ್ಮಲ್ಲಿದ್ದ ಆಸೆ ಪೂರಾ ಅಜ್ಜನ ಮೀಸೆ ಗಾಳಿಗೆ ಸಿಕ್ಕಿ ಎಲ್ಲೋ ದೂರದ ಮರದ ಮೇಲೆ ಬಿದ್ದಂಗೆ ಪೂರಾ ಕರ್‌ಗಿ ಹೋದೆ. ನಾ ಸಣ್ಣದಿರಿಕನ ಈ ಮಾತ್‌ನ ಒಮ್ಮೊಮ್ಮೆ ಮನೆಲೀ ಕೇಳ್‌ತಿದ್ದೆ. ಮೇಲೆ ಹೇಳ್‌ದಂಗೆ ನಾ ಕೇಳಿಕ್ಕೆ ಹೋಕನ ನಂಗೂ ಎರಡ್ ಸಮ್ಮಾಂನ ಸಿಕ್ಕ್‌ತಿತ್ತ್. ನಾ ಎಲ್ಲರಂಗೆ ಸುಮ್ಮನೆ ಬಾಯಿಮುಚ್ಚಿ ನನ್ನ ಕೆಲಸ ಮಾಡ್‌ತ್ತಿದ್ದೆ. ಹಂಗೇ ವರ್ಷ ಹೋಗಿ ಓ ಮೊನ್ನೆ ಈ 'ಆಟಕ್ಕೆ ಉಟ್ಟು ಲೆಕ್ಕಕೇ ಇಲ್ಲೆ' ಎಂಬ ಮಾತ್ ನಂಗೆ ಸರಿ ಗೊತ್ತಾತ್. ಅದ್‌ಕ್ಕೆ ಮುಂದೆ ನನ್ನ ತಾತ ಹೇಳ್‌ತ್ತಿದ್ದ ನೆನ್‌ಪು. ಯಾರಿಗಾರ್ ನಮ್ಮ ಕೈಯಿಂದ ಹನಿ ದಾನ ಇಲ್ಲರ್ ಉಪಕಾರ ಮಾಡಿರೆ ಅದರ ಅವು ಸಾಯಕನ ಮುಟ್ಟ ನೆಂಪುಲಿ ಇಸಿಕಂಡವೆ ಅದರ ಋಣನ ಯಾವುದಾರ್ ಸಣ್ಣ ಮಟ್ಟಿಗೆ ನಾ ಅವುಕ್ಕೆ ವಾಪಸ್ ಕೊಡೊಕ್ಕುತಾ ನೆನ್‌ಸಿಕಂಡ್ ಇದ್ದವೆ ಗಡ. ಹಂಗೆ ಈಗಲೂ ಈ ಪ್ರಪಂಚಲಿ ಅಂಥ ಜನಗ ಒಳತಾ ಹೇಳಿರೆ ಅದ್ ನಮ್ಮ ಕೈ ಬೆರಳ್‌ಗಳಷ್ಟೇ ಜನಗ. ಈಗನ ಜನಕ್ಕೆ ಅವರ ಕೆಲಸ ಆಕನಾ ಮುಟ್ಟ ಮಾತ್ರ ನಮ್ಮ ನೆಂಪು. ಮತ್ತೆ ಅವರ ಏದ್ರ್ ಹೋಕನವೂ ಕಣ್ಣೇ ಕಾಣದಂಗೆ ಹೋದವೆ ಗಡ. ಹಂಗೆ ನನ್ನ ತಾತ ಹೇಳ್‌ತ್ತಿದ್ದ. ಆ ಮಾತ್ ನಂಗೆ ಈಗ ನಿಜ ಆಗ್ತಾ ಉಟ್ಟು ತಾ ಅನ್‌ಸ್ಸಿದೆ. ನಾವೆಲ್ಲ ಬೇರೆವು ಕಷ್ಟಲಿ ಒಳತಾ ಅವುಕ್ಕೆ ಉಪಕಾರ ಮಾಡಿಕ್ಕೆ ಹೋದು. ಅವು ಲಾಯಿಕ್ಕ ನಮ್ಮ ಬಳ್‌ಸಿಕಂಡ್ ಕಡೆಗೆ ನಾವುಗ್ಗೆ

ಉಲ್ಪಾ ಹೊಡ್ದವೆ. ನಾವು ನಮ್ಮವುತಾ ಮಾತಾಡ್‌ಸಿಕಂಡ್ ಹೋದರೆ ಹೊಸಬರ ನೋಡ್ದಂಗೆ ನೋಡುವೆ. ಮನುಷ್ಯಂಗೆ ಅವುಕೆ ಬೇಕಾಕನ ಮಾತ್ರ, ನಾವು ನೆಂಟ್ರ್ ಅಲ್ಲರೂ ಒಂದೇ ಕುಟುಂಬಲ್ಲಿ ಹುಟ್ಟಿದವರಂಗೆ ಮಾತಾಡುವೆ. ಮಾತಾಡ್‌ದು ಏನ್, ನಗಾಡ್‌ದ್ದು ಏನ್. ಒಮ್ಮೆನೂ ಮನೆವರ ಕೇಳದ ಜನಗ ಆ ಹೊತ್ತಿಗೆ ಆಕನ ಅಜ್ಜಂದ ಹಿಡ್‌ದ್ದ್ ಪುಳ್ಳಿಕ್ಕಳ ಮುಟ್ಟ ಕೇಳುವೆ. ಇಂಥ ಜನಗ ಅವರ ಬೇಳೆ ಬೇಯೆಕನ ಮುಟ್ಟ ಮಾತ್ರ ಈ ಅವತಾರ ಕಟ್ಟುದು. ನಮ್ಮ ಕೈಯಿಂದ ಉಪಕಾರ ಪಡ್‌ಕಂದವು ಬೇರೆ ಜನಗಳೊಟ್ಟಿಗೆ ಸೇರಿಕಂಡ್ ನಮ್ಮನ್ನೇ ಹಿಂದೆಂದ ದೂರುವ ಕೆಲ್ಸ ಮಾಡುವೆ ಹಿಂಗೆ ಮನುಷ್ಯ ಜೀವನಲಿ ನಾವ್ಗೆ ಬೇಕಾದವರ ಕೈಯಿಂದಲೇ ತುಂಬಾ ಬೇನೆ ತಿಂದವೆ. ಹಂಗೆ ಇನ್ನು ಹೇಳ್ರೆ ನಮ್ಮ ಸಂಸಾರಲಿ ಈ ಮಾತ್ ಹಂಞಆರ್ ಒಪ್ಪಿದೆ. ಅದೂ ಈಗನ ಕಾಲದ ಮಕ್ಕಳಿಗೆ ಲಾಯಿಕ್ಕ್ ಒಪ್ಪಿದೆ. ಯಾಕೆತಾ ಹೇಳ್ರೆ ಮಕ್ಕ ಮದುವೆ ಆಕನ ಮುಟ್ಟ ಮಾತ್ರ ಅಪ್ಪ ಅಮ್ಮನ ಒಟ್ಟಿಗೆ ಇದ್ದವೆ. ಮತ್ತೆ ಅವರ ಹಕ್ಕಲೆ ಸಹ ಸೋಂಕುಲೆ. ಬರೇ ದುಡ್ಡು, ಜಾಗಕ್ಕೆ ಮಾತ್ರ ಅಪ್ಪ, ಅಮ್ಮ ದೇವ್ರು. ಇಲ್ಲರ್ ಹೊರಗೆನವರಂಗೆ ನೋಡುವೆ. ನರಿನ ಹಂಗೆ ಉಪಾಯ ಮಾಡಿ ಅವುಕ್ಕೆ ಬೇಕಾದರ ಪೂರಾ ಎಳ್‌ಕಂಡವೆ.

ಈಗನ ಸಮಾಜಲಿ ವೃದ್ಧಾಶ್ರಮ ಅಪ್ಪ, ಅಮ್ಮಂಗೆ, ತವ್ರು ಮನೆನಂಗೆ ಅವುಟು. ಮನೆಗೆ ಬರುವ ಗೂಡೆಗ ಮಗಳಂಗೆ, ಅಳಿಯಂದಿರ್ ಮಂಜನಂಗೆ ಇದ್ದರೆ ಈ ಆಶ್ರಮಗ ಹಂಞಾರ್ ತಗ್ಗುದು. ಇದರ ನಾ ಅಣ್ಣ ತಮ್ಮನವೂಕ್ಕು ಹೇಳ್‌ನೆ. ಅಣ್ಣ ತಮ್ಮನವು ಒಟ್ಟಿಗೆ ಇದ್ದರೆ ಸಮಾಜಲಿ ಕುಟುಂಬಗ ಒಡೆಕ್ಕಿಲ್ಲೆ. ಹಿಂಗೆ ಆಟಕ್ಕೆ ಮಾತ್ರ ಒಟ್ಟಿಗೆ ಸೇರುವ ಜನಗ ಲೆಕ್ಕ ಹಾಕುವ ಹೊತ್ತು ಬಾಕನ ಪತ್ತೇನೆ ಇರ್‌ದುಲ್ಲೇ. ಅವಶ್ಯಕತೆಗೆ ಮಾತ್ರ ನಮ್ಮ ನೆಂಪು ಆದರೂ ಹಿಂದೆಂದ ಬೆನ್ನಿಗೆ ಚೂರಿ ಹಾಕುವ ಕೆಲ್ಸ ಮಾಡ್ಬೇಡಿ. ಇದರ ನಾ ಎಲ್ಲವುಕ್ಕೂ ಹೇಳ್‌ದುಲೆ. ಸಮಾಜಲಿ ಇಂಥ ವರ್ತನೆ ಇದ್ದವು ಒಳ. ಪ್ರೀತಿ ಸಹಕಾರಂದ ಮಾತ್ರ ಸಮಾಜ ಮುಂದೆ ಹೋಕೆ ಸಾಧ್ಯ. ಎಲ್ಲವೂ ಒಟ್ಟಿಗೆ ಕೂಡಿ ಬಾಳಮ.

---

**ಅನುಷಾ ಟಿ.ಹೆಚ್.**
ದ್ವಿತೀಯ ಬಿ.ಎ., ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಕಾಲೇಜು, ಸುಬ್ರಹ್ಮಣ್ಯ




# ನಾವೂ ನಮ್ಮ ಬಸ್ಸೂ



ಲೀಲಾ ದಾಮೋದರ

ಸಾರ್ವಜನಿಕ ಸಾರಿಗೆ ವ್ಯವಸ್ಥೆಲಿ ಬಸ್ಸ್‌ಗೆ ಮುಖ್ಯ ಸ್ಥಾನ ಉಟ್ಟು. ನಮ್ಮ ದೇಶದ ಹೆಚ್ಚಿನ ಕಡೆಗಳ್‌ಲಿ ಬಸ್ಸೇ ಮುಖ್ಯ ಆದ ಸಂಚಾರ ಸಾಧನ. ಪ್ರಧಾನ ಆಗಿ ನಮ್ಮ ದಕ್ಷಿಣ ಕನ್ನಡ, ಕೊಡ್ಗು ತಕಂಡರೆ ಇಲ್ಲಿ ಹಡಗ್ ಸಂಚಾರದ ಅಗತ್ಯ ಇಲ್ಲೆ. ಇಮಾನ ನಿಲ್ದಾಣ, ರೈಲ್ ಹಳಿಗಳ ಮಾಡಿಕೆ ಬಾರೀ ಬಂಗ. ಆದೊರೂ ಸದ್ಯಕ್ಕೆ ಅಂತ ಸಾಧ್ಯತೆ ಕಾಂಬೊದ್ಲೆ. ಇನ್ನ್ ಕಾರ್ ಜೀಪುಲಿ ಓಡಿಯಾಡಕ್ ತೇಳ್ರೂ ಅದ್ ತೀರಾ ಖಾಸಗಿ ವ್ಯವಸ್ಥೆ. ಹಾಂಗಾಗಿ ನಾವ್ಗೆಲ್ಲವ್ಕೂ ಒಗ್ಗುವ, ಒಪ್ಪುವ ಸಂಚಾರ ಸಾಧನ ಬಸ್ಸ್.

**ಬಸ್ಸ್‌ತೇಳುವ ಆಪ್ತ ಸಖ**

ಕರ್ನಾಟಕದ ಸಾರಿಗೆ ವ್ಯವಸ್ಥೆ ಇಡೀ ದೇಶಲಿಯೇ ಹೆಸರ್ ಪಡ್ದ ವ್ಯವಸ್ಥೆ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಬೇರೆ ಬೇರೆ ತರದ ಬಸ್ಸ್ ಸೇವೆನ ಒದ್‌ಗ್‌ಸಿದೆ. ಅಲ್ಲಲ್ಲಿ ನಿತ್ತ್ ಹೋವ ಸೆಟ್ಲ್ ಬಸ್ಸ್‌ಂದ ಹಿಡ್ದ್, ತಡೆ ಇಲ್ಲದೆ ಹೋವ ಎಕ್ಸ್‌ಪ್ರೆಸ್ ಬಸ್ಸ್‌ಂದ ಸುರು ಮಾಡಿ, ರಾಜ ಹಂಸಂಗ, “ಮಗುವಿನಂತೆ ನಿದ್ರಿಸಿ” ಕಂಡ್ ಹೋಕೆ ಇರುವ ಐರಾವತಂಗ ಅಲ್ಲದೆ ಸೀದಾ ಇಮಾನ ನಿಲ್‌ದಾಣಗಳಿಗೇ ತಕಂಡ್ ಹೋಗಿ ಬುಡುವ ಫ್ಲೈ



ಬಸ್ಸ್‌ಗಳಿಗೆ ಮುಟ್ಟ ಬೇರೆ ಬೇರೆ ನಮುನೆನ ಅವಶ್ಯಕತೆಗೆ ತಕ್ಕ ಹಾಂಗೆ ಇರುವ ಬಸ್ಸ್‌ಗನೂ ಒಳೊ. ಹಿಂದೆ ಎಲ್ಲ ಬಸ್ಸ್‌ಗ ಬಾಕೆ ಹೋಕೆ ಒಂದು ಸಮೆ ಅದ್‌ಇದ್‌ತ ಇತ್ತ್‌ಲೆ. ಆದರೆ ಈಗ ಹಾಂಗೆ ಅಲ್ಲ. ಬಸ್ಸ್‌ಗ ಸಮೆಗೆ ಬಂದವೆ. ಬಸ್ಸ್‌ಗಳ ಸಂಖ್ಯೆ ಹೆಚ್ಚಿರುದರ್‌ಂದ ಸಾದಾರ್ಣ ಆಗಿ ರಶ್ ಇರ್ದುಲೆ. ಮುಂಗಡ ಆಸನ ಕಾದ್ ಇಸಿರೆ ಅದೇ ಸೀಟ್ ಕುದ್‌ರಿಕೆ ಸಿಕ್ಕಿದೆ. ಬಸ್ಸ್‌ನ ಸಿಬ್ಬಂದಿನ ಫೋನ್ ನಂಬ್ರ ಕೂಡಾ ಮೆಸೇಜ್ ಮೂಲಕ ಮೊಬೈಲ್ಗೆ ಬಂದದೆ. ಹಾಂಗಾಗಿ ನಾವು ಎಲ್ಲಿ ವಳೆತ ಬಸ್ಸ್‌ನೊವ್ಕೆ ತಿಳ್‌ಸಿಕೆ ಆದ್ದೆ. ಬಸ್ಸ್ ಎಲ್ಲಿ ಬಂದ್ ಕಂಡ್ ಉಟ್ಟುತ ನಾವ್‌ಗೆ ತಿಳ್‌ಕಂಬಕೂ ಆದ್ದೆ.

ದೂರದ ಊರುಗಳಿಗೆ ಹೋಕೆ ಇರ್ಲ್‌ನ ಬಸ್ಸುಗಳ್ನೇ ಹೆಚ್ಚಿನೊವು ಆರ್ಸಿಕಂಬೊದು. ಕೈಕಾಲ್ ನೀಂಡಿ ಮಲ್ಕ್ಯಂಡ್ ಹೋಕೊರೆ ಸ್ಲೀಪರ್ ಕೋಚ್‌ಗ ಒಳೊ. ನಿದ್ದೆ ಬಂದರೂ ಬಾರದ್ದರೂ ಇಡೀ ಇರ್ಲ್ ಕುದ್ದ್ ಮೊಣ್ಕಾಲ್ ಬೇನೆ ಆವ, ಪಾದ ಬಾಪುವ ತೊಂದರೆಂದ ಬಚಾವ್ ಆಕ್. ಅದರ್ಲಿಯೂ ಎಸಿ, ನಾನ್ ಎಸಿತ ವಿಧಗ ಬೇರೆ. ವರ್‍ದ ಮಲ್‌ಕ್ಯಂಡ ಹೋಕೊರೆ ಐರಾವತಗ, ರಾಜಹಂಸಗ ಲಾಯ್ಕ್. ಕುತ್ತ ಕುದ್‌ದ್‌ಕಂಡೇ ಪ್ರಯಾಣ ಮಾಡೊಕುತಾದರೆ ಸಾಧಾರ್ಣ ವೇಗ ದೂತಂಗ ಹೇಂಗೂ ಒಳೊ. ಕೆಲೊವು ಜನಗಳಿಗೆ ಮಲ್ಕ್ಯಂಡ್ ಹೋವ ಬಸ್ಸ್‌ಲಿ ಹೋಕೆ ಹೆದ್ರಿಕೆ. ಎಲ್ಲಿಯಾರ್ ನಿದ್ದೆ ಮಸ್ತ್‌ಲಿ ಸೀಟ್‌ಂದ ಹೊಣ್ಕಿ ಬಿದ್ದ್ ಬುಟ್ಟರೆ, ಇಲ್ಲೆ ಇಡೀ ಬಸ್ಸೇ ಹೊಣ್ಕಿ ಗೊಡ್ಲುಗೆ ಬಿದ್ದರೆ, ಅಲ್ಲ ಎದರ್‌ಂದ ಬಾವ ಗಾಡಿ ಕುದ್ದ ಬಸ್ಸ್‌ಗೆ ಗುದ್ದಿ ಅಪಘಾತ ಆಗಿಬುಟ್ಟರೆತ!! ಹಾಂಗಾಗಿ ಬಸ್ಸ್‌ನ ಈ ಎಲ್ಲ ತೊಂದರೆಂದ ಕಾಪಾಡವರ ಹಾಂಗೆ ಕಣ್ಣ್ ಮುಚ್ಚದೆ ಬೊಳ್ಪು ಮಾಡೊವೂ ಇದ್ದವೆ. ನಮ್ಮ ಜೊತೆಗಾರ್ತಿ ಒಂದಕ್ಕೆ ಇಂತ ಹೆದ್ರಿಕೆ ಬಾರೀಇತ್ತ್. ನಾವು ಮೈಸೂರು, ಬೆಂಗ್ಳೂರುತ ಮಕ್ಕಳ ಪರೀಕ್ಷೆ ಪೇಪರ್‌ತಿದ್ದಿಕೆ ಹೋಕನ ಸ್ಲೀಪೆರ್‌ಕೋಚ್‌ನ್ನೇ ಇಷ್ಟಪಡ್ತಿದ್ದೊ. ಆದರೆ ಆ ಜೋಸ್ತಿ ಸರ್ವತ್ತಾ ಮಲ್ಕ್ಯಂಡ್ ಹೋಕೆ ಕೇಳ್‌ತಿತ್ಲೆ. ಹಾಂಗಾಗಿ ನಾವು ಒಮ್ಮೆ ಒಮ್ಮೆ ಕುದ್ರುವ ಮಲ್ಗುವ ಎಡ್ರೂ ವ್ಯವಸ್ಥೆ ಇರುವ ಖಾಸಗೀ ಬಸ್ಸ್‌ನ ಮೊರೆ ಹೋತಿದ್ದೊ. ಆ ಬಸ್ಸ್‌ಲಿ ಕೆಳೆಗೆಲ್ಲ ಕುದ್ರುವ ಸೀಟ್ ಆದರೆ ಮೇಲೆ ಮಲ್ಗುವ ಆಸನಗ. ಜೊತೆಗಾರ್ತಿನ ಕೆಳೆಗೆನ ಸೀಟ್‌ಲಿ ಕುದ್‌ದ್‌ರ್ಸಿ ಬಸ್ಸ್‌ನ ಕಾಪಾಡುವ ಹೊಣೆನ ಅದ್ಕೆ ಒಪ್ಪುಸಿ ನಾವು ಮೇಲೆ ಹತ್ತಿ ಆರಾಮಲಿ ಮಲ್‌ಗುತಿದ್ದೊ!

ಬೊಳ್‌ಪಿಗೆ ಮತ್ತೆ ಹಿಂಬೊತ್ತು ಬಸ್ಸ್‌ಗ ಸಾಲೆ ಕಾಲೇಜನ ಮಕ್ಕಳ್‌ಂದ ತುಂಬಿ ತುಳ್ಕಿವೆ. ಆಗ ಬಸ್ಸ್‌ಲಿ ಹೋದು ಹಂಞ ಕಷ್ಟನೆ! ಆದರೆ ಸರ್ಕಾರ ರಿಯಾಯಿತಿ ದರಲಿ ಓಡಿಯಾಡಿಕೆ ಮಕ್ಕಳಿಗೆ ಅವ್‌ಕಾಶ ಮಾಡಿಕೊಟ್ಟ್ ಅವು ವಿದ್ಯೆ ಕಲಿವಾಂಗೆ ಮಾಡ್‌ದು ನಿಜಕ್ಕೂ ಒಳ್ಳ ಕೆಲ್ಸ. ಮಕ್ಕಳಿಗೆ ಮಾತ್ರ ಅಲ್ಲ, ದಿನೋಳು ಕೆಲ್ಸಕ್ಕಾಗಿ ಓಡ್ಯಾಡೊವು ಕೂಡಾ ಸೀಸನ್ ಟಿಕೆಟ್ ಮಾಡ್ಸಿಕಂಡ್ ಬಸ್ಸ್ ಪ್ರಯಾಣದ ಪ್ರಯೋಜನ ಪಡ್ಕಣಕ್. ಬೆಂಗ್ಳೂರ್ಲಿ ಇಡೀ ದಿನದ ಟಿಕೆಟ್ ಒಮ್ಮೆ ತಕಂಡ್ರೆ ಎಷ್ಟ್ ಸರ್ತಿನೂ ಬೆಂಗ್ಳೂರ್ ತುಂಬಾ ಓಡಿಯಾಡಕ್. ಅರ್ವತ್ತು ವೊರ್ಷ ಮೇಲ್ಪಟ್ಟ ಹಿರಿಯ ನಾಗರಿಕರಿಗೆ ರಾಜಹಂಸದ ವರೆಗೆನ ಬಸ್ಸ್‌ಗಳ್ಲಿ ರಿಯಾಯಿತಿ ಉಟ್ಟು. ಪ್ರಾಯದವುಕೆ ಕುದ್ದು ಪ್ರಯಾಣ ಮಾಡ್ದು ಕಷ್ಟ, ಅವ್ಕೆ ಸ್ಲೀಪರ್ ಬಸ್ಸ್‌ಲಿ ರಿಯಾಯ್ತಿ ಕೊಡೊಕುತ ವಾಚಕರವಾಣಿಗೆ ಕೆಲೊವು ಜನ ಕಾಗದಗಳ ಬರ್ದರೂ ಅದ್ ಸಂಮ್ಮಂದ ಪಟ್ಟವರ ಗಮನಕ್ಕೆ ಬಂದ ಹಾಂಗೆ ಕಾಂಬೊದುಲೆ.

**ಕತ್ತೆ ಬಲ್ಲುದೆ ಕತ್ತುರಿಯ ಪರಿಮಳವ?**

ಅದೆಲ್ಲ ಇರ್ಲಿ, ನಾ ಈಗ ಮುಖ್ಯ ಆಗಿ ಬರಿಯಕೆ ಹೊರ್ಟದ್ ನಾವ್ಗೆ ಇಷ್ಟೆಲ್ಲಾ ಪ್ರಯೋಜನ ಇರುವ ನಮ್ಮ ಬಸ್ಸ್‌ಗಳ ನಾವು ಹೇಂಗೆ ನೋಡಿಕಂಡವೆತ ಹೇಳ್ದರ ಬಗ್ಗೆ. ಇತ್ತೀಚೆಗೆ ಮನೆಗೆ ಬಂದ ತಂಗೆನ ಬಸ್ಸ್‌ಗೆ ಹತ್ತ್‌ಸಿ ಬುಡಿಕೆ ನಿಲ್ದಾಣಕ್ಕೆ ಹೋಗಿದ್ದೆ. ಬೆಂಗ್ಳೂರುನ ಮೈಸೂರು ರೋಡುಲಿ ಇರುವ ಸೆಟೆಲೈಟ್ ನಿಲ್ದಾಣಂದ ಮಡ್ಕೇರಿ, ಸುಳ್ಯ ಕಡೆಗೆ ಬೇಕಾದಷ್ಟ್ ಬಸ್ಸ್‌ಗ ಒಳೊ. ಆದರೆ ಮತ್ತೂ ಅಷ್ಟ್ ದೂರ ಹೋಕೊಲೆ, ನೋಡೊನೊ ಕೆಂಪೇಗೌಡ ನಿಲ್ದಾಣಲೇ ಬಸ್ಸ್ ಇದ್ದ್ ಬುಟ್ಟರೆತ ಅಲ್ಲಿಗೆ ಹೋದೊ. ಒಂದೇ ಒಂದು ಬಸ್ಸ್ ಇರಿಕೂ ಇತ್ತ್. ಆದರೆ ಅದ್ ಸುಬ್ರಹ್ಮಣ್ಯ ದಾರಿಲಿ ಹೋಗುವಂತದ್. ತಿರ್ಗಾಸ್‌ಗ ಹಂಞ ಹೆಚ್ಚಿತಲ್ಲದೆ ಬೇರೇನೂ ತೊಂದರೆ ಇಲ್ಲೆ. ಹೀಂಗೆ ನೆನ್ಸಿಕಂಡ್ ಬಸ್ಸ್‌ಗೆ ಹತ್ತಿದೊ. ಚಾಲಕ ಬಸ್ಸ್ ಒಳೆಗೆ ಇತ್ತ್‌ಲೆ. ನಿರ್ವಾಹಕ ಸೀಟ್ ಅಡಿಂದೆಲ್ಲ ನೆಲ ಕಡ್ಲೆ ಚೂಲಿನ ಗುಡ್ಸಿ ರಾಸಿ ಹಾಕ್ತಿತ್ತ್. ಈ ಬಸ್ಸ್‌ಲಿ ಕುದ್ದೊವು ಮೊನ್‌ಸರೋ ಕಾಡ್ ಪ್ರಾಣಿಗಳೋತ ಸೋಜಿಗ ಆತ್. "ಬಸ್ಸಲ್ಲಿ ಹೀಗೆ ಕಸ ಹಾಕಿ ಗಲೀಜು ಮಾಡದಂತೆ ನೋಡಿಕೊಳ್ಳಬೇಕು, ಜೋರು ಮಾಡಬೇಕು"ತ ಹೇಳ್ದೊ. ಅಗ ಅಂವ "ಹೇಳಿದ್ರೆ ಕೇಳುವುದಿಲ್ಲ ಮೇಡಂ"ತ ಹೇಳಿ ತನ್ನ ಕೆಲ್ಸನ

ಮುಂದುವರ್ಸಿತ್. ಇನ್ನ್ ಕೆಲೊವು ಜನ ಬಸ್ಸ್‌ನ ಕಿಡ್ಕೆಂದ ಮಡೆ ಉಗಿದು, ಎಲಾಡ್ಕೆ ತಿಂದ್ ಉಗಿದು ಮಾಡಿವೆ ಅಲ್ಲದೆ ಕಕ್ಕಿಕೆ ಬಂದರೆ ಯಾವ ಮುಲಾಜಿ ಇಲ್ಲದೆ ತಲೆ ಹೊರೆಗೆ ಹಾಕಿ ಕಕ್ಕಿವೆ. ಅದೆಲ್ಲ ಗಾಳಿಗೆ ಹಾರಿ ಹಿಂದೆನ ಸೀಟ್‌ಲಿ ಕುದ್ದವರ ಮೇಲೆ ರಟ್ಟಿದೆ. ಬಸ್ಸೆಲ್ಲ ಗಲೀಜ್ ಆದ್ದೆ. ಇಂತ ಅನಾಗರಿಕ ನಡೊಳ್ಕೆ ಇಂದೂ ನಡ್ಕಂಡ್ ಉಟ್ಟು.

ನಮ್ಮ ಬಸ್ಸ್‌ಗಳ್ಲಿ ಇರುವ ಸೌಕರ್ಯಂಗ ಹೇಂಗೆ ದುರ್ಬಳಕೆ ಆದ್ದೆತ ನೋಡೊನೊ. ಇಂದ್ ಬಸ್ಸ್‌ಗಳ್ಲಿ ಹೆಳ್ಮಕ್ಕಳಿಗೆ, ಹಿರಿಯ ನಾಗರಿಕಂಗಳಿಗೆ, ಸ್ವಾತಂತ್ರ್ಯ ಹೋರಾಟಗಾರ್ರ್‌ಗೆ, ಅಂಗವಿಕಲಂಗಳಿಗೆ, ಶಾಸಕರಿಗೆಲ್ಲ ಆಸನಗಳ ಕಾದಿಸಿವೆ. ಶಾಸಕರ್ ಬಸ್ಸ್‌ಲಿ ಹೇಂಗೂ ಬಾದ್ಲೆ ಬುಡಿ. ಆ ಸೀಟ್‌ಲಿ ಯಾರೂ ಕುದ್ರಕ್. ಆದರೆ ಒಳ್ದ ಸೀಟ್‌ಗ ಆಯಾಯ ಅರ್ಹಂಗಳಿಗೆ ಸಿಕ್ಕುದು ಕಮ್ಮಿ. ಹಿರಿಯೊವ್ಕೆ, ಹೆಳ್ಮಕ್ಕಳಿಗೆ ಅವರವರ ಸೀಟ್‌ನ ಬುಟ್ಟುಕೊಡೊಕುತೇಳ್ವ ಕನಿಷ್ಠ ನಾಗರಿಕ ಪ್ರಜ್ಞೆ ಕೂಡಾ ಇಲ್ಲದೊವು ಒಳೊ.

ಇನ್ನ್ ಕೆಲೊವು ಕೆಟ್ಟ ಚಟಗ, ಏನ್‌ತೇಳ್ರೆ ಬಸ್ಸ್‌ನ ಸೀಟ್‌ನ ಹರಿದು, ತಮ್ಮ ಹೆಸ್‌ರ್‌ಗಳ ಬರಿದು, ತಿಂದ ಹಣ್ಣ್‌ನ ಚೂಲಿ. ಚಾಕ್ಲೆಟ್ ಹೊದ್ಕೆಗಳ ಎಲ್ಲಾ ಕಾಲ್ ಕೆಳೆಗೆ ಹಾಕುದು ಇಲ್ಲೆ ಕಿಡ್ಕೆಂದ ಹೊರೆಗೆ ಇಡ್ಡು ಇಂತದೆಲ್ಲಾ ಪುಣ್ಯಕ್ಕೆ ಬೀಡಿ ಸಿಗ್ರೇಟ್‌ಗಳ ಜನ ಬಸ್ಸ್‌ನೊಳೆಗೆ ಎಳಿದ್‌ಲೆ. ಅಷ್ಟರ ಮಟ್ಟಿಗೆ ನಮ್ಮ ಜನಂಗ ಸುದಾರ್ಸಿಯೊಳೊತೇಳಕ್.

ಇದರ್‌ಂದಳೂ, ಹೋವ ಕಾಲದ ಬುದ್ದಿತೇಳ್ರೆ ಬಸ್ಸ್‌ಗಳಿಗೆ ಕಲ್ಲ್ ಹೊಡಿದು, ಕಿಚ್ಚಿಕೊಡುದು. ಯಾದೇ ಕಾನೋನು, ಸುದಾರ್ಣೆ, ಬದಲಾವಣೆ ಆಕನ ಅದ್ ಏನ್ ಎತ್ತತ ತಿಳ್ಕಂಬಕೇ ಹೋಗದೆ ಯಾರೋ ತಲೆಹೋಕರ ಮಾತ್ ಕೇಳಿಕಂಡ್ ಸಾರ್ವಜನಿಕ ಆಸ್ತಿಪಾಸ್ತಿಗೆ ಹಾನಿ ಮಾಡ್ದು ನಾಗರಿಕ ನಡೋಳ್ಕೆ ಅಲ್ಲ. ಒಂದು ಬಸ್ಸ್‌ನ ಕ್ರಯ ಎಷ್ಟ್, ಅದರ ನಿರ್ವಹಣೆಗೆ ಎಷ್ಟ್ ಕರ್ಚಿ ಆದ್ದೆ ಅದರ ತಿಳುವಳ್ಕೆನೂ ಇಲ್ಲದೆ ಹುಂಬರ ಹಾಂಗೆ ಬಸ್ಸ್‌ಗೆ ಕಿಚ್ಚಿ ಕೊಡ್ದುತೇಳ್ರೆ!!

**ಸುದಾರ್ಣೆ ಕಂಡಿತ ಸಾಧ್ಯ ಉಟ್ಟು:**

1. ಬಸ್ಸ್ ಸಾರ್ವಜನಿಕ ಆಸ್ತಿ, ಅಂದರೆ ನಮ್ಮ ಆಸ್ತಿ. ಇದರ್ಲಿ ಸಂಚಾರ ಮಾಡುವ ಸೌಕರ್ಯ, ಹಕ್ಕ್ ಎಲ್ಲೊವ್ಕೂ ಉಟ್ಟು. ಆದರೆ ಆ ಬಸ್ಸ್‌ನ ನಿರ್ವಹಣೆ ಮಾಡುವ ಜವಾಬ್ದಾರಿ ಚಾಲಕರ್ದ್ ಮತ್ತೆ ನಿರ್ವಾಹಕರ್ದ್. ಒಂದು

ತರಗತಿನ ಒಬ್ಬ ಅಧ್ಯಾಪಕ ಹೇಂಗೆ ನೋಡಿಕಂಡವೆನೋ ಹಾಂಗೇ ಬಸ್ಸ್‌ನ್ನೂ ಅವು ನೋಡಿಕಣೊಕು. ಚಾಲಕಂಗ ರಸ್ತೆ ಮೇಲೆ ಗಮನ ಇಸಿಕಂಡ್ ಗಾಡಿ ಓಡ್ಸರ್ಕಾದ್ದೆ. ಬಸ್ಸೊಳೆಗೆನ ವ್ಯವಹಾರಕ್ಕೆಲ್ಲ ಅವ್ಕೆ ತಲೆ ಹಾಕಿಕೆ ಆದ್ಲೆ. ಹಾಂಗಾಗಿ ನಿರ್ವಾಹಕಂಗಳೇ ಬಸ್ಸೊಳೆಗೆನ ಶಿಸ್ತ್, ಶುಚಿತ್ವನ ನೋಡಿಕಣೊಕಾದ್ದೆ. ಹೆಳ್ಮಕ್ಕಳಿಗೆಂತೇಳಿ ಇಸಿದ ಸೀಟ್‌ಲಿ ಕುದ್ದ ಗಂಡ್ಸ್‌ಗಳ ಎದ್ದ್‌ರ್ಸಿ ಅವೇ ಕುದ್ರುವಾಂಗೆ ಮಾಡ್ದು, ಪ್ರಾಯದೊವು, ವಿಕಲಚೇತನಂಗಳಿಗೆ ಅವರವರ ಆಸನಗಳ ಕೊಡ್ದು–ಇದೆಲ್ಲ ನಿರ್ವಾಹಕಂಗ ಮಾಡೊಕು. ಆದರೆ ಈ ಬಗ್ಗೆ ಯಾವ ನಿರ್ವಾಹಕಂಗಳೂ ತಲೆಕೆಡ್ಸಿಕಂಬೊದ್‌ಲೆ. ಇದ್ಕಾಗಿ ಅವ್ಕೆ ಸಾರಿಗೆ ಅಧಿಕಾರಿಗ ತರಬೇತಿ ಕೊಡೊಕು. ಬಸ್ಸ್‌ನೊಳೆಗೆ ಕಾಡ್ ಹಾಕದಾಂಗೆ, ಬಸ್ಸ್‌ಂದ ಹೊರೆಗೆ ಉಗಿಯದಾಂಗೆ, ಕಕ್ಕದಾಂಗೆ ಎಚ್ಚರಿಕೆ ಕೊಡೊಕು. ಕಕ್ಕುವ, ಉಗಿವ ಅಭ್ಯಾಸದೊವು ಪ್ಲಾಸ್ಟಿಕ್ ತೊಟ್ಟೆ ಒಟ್ಟಿಗೇ ತಕಂಡ್ ಹೋವ ಅಭ್ಯಾಸ ಬೆಳ್ಸಿಕಂಬ ಹಾಂಗೆ ಒತ್ತಡ ಹೇರೊಕು. ಒಂದೆರ್ಡ್ ಸರ್ತಿ ಜನಂಗ ಹೇಳ್ದ್ ಕೇಳಿಕಿಲೆ. ಆದರೆಕಟ್ಟ್ ನಿಟ್ಟ್ ಆಗಿ ಈ ನಿಯಮಗಳ ಪಾಲ್ಸಿರೆ ಜನಂಗಳೂ ಒಗ್ಗಿಕಂಡವೆ. ನಮ್ಮ ಜನಂಗಳ ಮನೋಭಾವ ಹೇಂಗೆತೇಳ್ರೆ ಯಾದೇ ನಿಯಮನ ಪಾಲನೆ ಮಾಡ್ದರ್‌ಂದೊಳೂ ಮುರ್ದರೇ ಹೆಚ್ಚ್‌ಗಾರಿಕೆತೇಳ್ವಂತದ್. ಒಬ್ಬ ನಿಯಮ ಮುರ್ದರೆ ಹತ್ತ್ ಜನಿಗೆ ತೊಂದರೆ ಆದ್ದೆತೇಳ್ದರ ಎಲ್ಲೊವೂ ನೆನ್ಪಿಸಿಕಣೊಕು. ಮತ್ತೂ ಅಶಿಸ್ತ್ ಮುಂದುವರ್ದರೆ ದಂಡ ಹಾಕೊಕು, ಶಿಕ್ಷೆ ಕೋಡೊಕು. ಪ್ರತಿ ಬಸ್ಸ್‌ಲಿಯೂ ಮೈಕ್ ವ್ಯವಸ್ಥೆ ಇರೊಕು. ಒಂದೋ ಚಾಲಕ/ನಿರ್ವಾಹಕ ಬಸ್ಸ್ ಹೊರ್ಡಿಕೆ ಮುಂದೆ ಈ ತಿಳುವಳಿಕೆನ ಕೊಡೊಕು, ಇಲ್ಲೆ ಮುದ್ರಿಸಿದ ಎಚ್ಚ್‌ರ್ಕೆನಾರ್ ಕೇಳ್ಸೊಕು.

2. ಇಂದ್ ಪ್ರತಿ ನಿಲ್ದಾಣಗಳ್ಲಿ ಕೂಡಾ ನಿರ್ದಿಷ್ಟ ಜಾಗೆಗೆ ಹೋವ ಬಸ್ಸ್‌ನ ಸಂಖ್ಯೆ ಎಷ್ಟ್, ಅದ್ ನಿಲ್ದಾಣದ ಯಾವ ಅಂಕಣಲಿ ನಿತ್ತುಟು? ಎಷ್ಟ್ ಹೊತ್ತಿಗೆ ಹೊರ್ಟದೆ? – ಇಂತ ಮುದ್ರಿತ ತಿಳವಳ್ಕೆ ಕೇಳಿ ಬಂದದೆ. ಅದೇ ರೀತಿ ನಿಮ್ಮ ಸೊತ್ತು ವಗೈರೆ ಜೋಪಾನ ಮಾಡಿಕಣಿ, ಕಳ್ಳ ಕಾಕರ್ ಒಳೊತೇಳುವ ಎಚ್ಚರ್ಕೆನೂ ಕೇಳಿ ಬಂದದೆ. ಇದ್ ನಿಜವಾಗ್ಯೂ ಒಳ್ಳ ಕ್ರಮ. ಅದರೊಟ್ಟಿಗೆ ನಿಲ್ದಾಣಲಿ ಕಸಕಡ್ಡಿ ಹಾಕಿಕೆ ಬೊತ್ತು, ಮಡೆ ಉಗಿಯಕೆ ಬೊತ್ತು, ಸರದಿ ಸಾಲ್‌ಲಿ ಹತ್ತುದು ಇಳಿದು ಮಾಡೊಕು, ಬಸ್ಸೊಳಗೆ ನಿರ್ದಿಷ್ಟ ವರ್ಗದೊವ್ಕೆ ಮೀಸಲ್ ಇಸಿದ ಆಸನಗಳ ಅವ್ಕೇ

ಬುಟ್ಟುಕೊಡೊಕು – ಇಂತ ಸಂದೇಶಗಳ್ನೂ ಅಗಾಗ ಪ್ರಸಾರ ಮಾಡೊಕು. ಆಗ ನಮ್ಮನ್ನೂ ಕೇಳೊವು ಒಳೊತೇಳುವಂತದ್ದ್ ಜನಂಗಳಿಗೆ ಅರ್ಥ ಆದ್ದೆ. "ನಮ್ಮನ್ನು ಉಪಯೋಗಿಸಿ"ತೇಳವ ಬರ ಹೊತ್ತಕಸದ ಬುಟ್ಟಿಗ ಅಲ್ಲೆಲ್ಲಿ ಇದ್ದೊರೂ ಅದರ ಕೆಲೊವು ಜನ ಉಪಯೋಗಿಸಿವೆ, ಇನ್ನ್ ಕೆಲೊವು ಕುದ್ದಲ್ಲಿ ನಿತ್ತಲ್ಲಿ ಕಿತ್ತುಳಿ ಚೂಲಿ, ಚಾಕ್ಲೆಟ್ ಹೊದ್ಕೆಹಾಕಿವೆ. ಸಹ ಪ್ರಯಾಣಿಕಂಗ ಅದರ ನೋಡಿ ಸುಮ್ಮನೆ ಇರದೆ ಅವ್ಕೆ ತಿಳುವಳ್ಕೆ ಹೇಳೊಕು. ಇದೆಲ್ಲ ಎಷ್ಟ್ ಸಣ್ಣ ಸಂಗ್‌ತಿಗತ ಯಾರಿಗಾರೂ ಅನ್ಸದೆ ಇರಿಕಿಲೆ. ಆದರೆ ಸಣ್ಣ ಸಂಗ್ತಿಗಳ್‌ಂದಳೇ ದೊಡ್ಡ ಸಾಧನೆ ಆದು. ಇದೆಲ್ಲ ಕನಿಷ್ಠ ನಾಗರಿಕ ನಡೊಳ್ಕೆ. ಇಸ್ಟ್ ಮಾಡದೆ ಹೋದರೆ ಹೇಂಗೆ?

3. ಇನ್ನ್ ಬಸ್‌ಗಳಿಗೆ ಕಲ್ಲ್ ಹೊಡಿವ, ಕಿಚ್ಚಿಕೊಡುವ ವಿಚಾರ–ಇದ್ ಸರ್ವತ್ತಾ ಮಾಡಿಕೆ ಬೊತ್ತದಂತ ಕೆಲ್ಸ. ಯಾದೇ ಒಂದು ಸುದಾರ್ಣೆ, ಬದ್ಲಾವಣೆನ ಜನಂಗಳಿಗೆ ಒಮ್ಮೆಂದ ಒಮ್ಮೆಗೇ ಒಪ್ಪಿಕಂಬಕೆ ಆದ್ಲೆ. ಆ ಸಂದರ್ಬಲಿ ಅದರ ಸೆರಿಯಾಗಿ ತಿಳ್‌ಕಂಬ ಪ್ರಯತ್ನ ಮಾಡೊಕು. ಅದ್ ಬುಟ್ಟ್ ಪ್ರಜಾಪ್ರಭುತ್ವಲಿ ವಾಕ್ ಸ್ವಾತಂತ್ರ್ಯ ಉಟ್ಟು, ಪ್ರತಿಭಟಿಸುವ ಸ್ವಾತಂತ್ರ್ಯ ಉಟ್ಟುತೇಳಿ ಬೇಕಾಬಿಟ್ಟಿ ನಡ್ಕಂಬಕೆ ಆದ್ಲೆ. ಮಾತಾಡ್ವ ಮಾತ್‌ಲಿ ಸೊಯೆ ಇರೊಕು, ಪ್ರತಿಭಟನೆ ಮಾಡಿಕೆ ರೀತಿ ನೀತಿ ಇರೊಕು. ಮಾಡುವ ಹಾನಿ ಮಾಡಿ ಪೋಲೀಸ್‌ಗ ತಡಿಯಕಾಗಿತ್ತ್‌ತೇಳ್ರೆ ಹೇಂಗೆ? ಅವೂ ಮೊನ್ಸರೇ ಅಲ್ಲ? ಅವರ ಜೀವಕ್ಕೂ ಬೆಲೆ ಉಟ್ಟಲೆ? ಇಂತ ಸಂದರ್ಭಗಳ್ಲಿ ಯಾರ್ ಬಸ್‌ಗಳ ಸುಟ್ಟವೆನೋ ಅವಂರ್ದಳೇ ಅದರ ನಷ್ಟನ ವೊಸೂಲು ಮಾಡೊಕು. ಯಾಕೆತೇಳ್ರೆ ಅದ್ ಅವರ ಸೊಂತ ಆಸ್ತಿ ಅಲ್ಲ, ಬಿಟ್ಟಿ ಬಿದ್ದದೂ ಅಲ್ಲ – ಅದ್ ಎಲ್ಲವರ್ದ್. ಆಗಳೇ ಅವ್ಕೆ ಆಸ್ತಿ ಪಾಸ್ತಿ ಹಾಳ್ ಮಾಡ್ರೆ ಕಷ್ಟ ಉಟ್ಟುತ ಗೊತ್ತಾದು.

ಒಂದು ಬಸ್ಸ್‌ನ ತಯಾರ್ಸುವಲ್ಲಿ ಎಷ್ಟೆಲ್ಲಾ ಶ್ರಮ ಹಾಕೊಕು, ಬಂಡವಾಳ ಹೂಡೊಕು! ಎಷ್ಟ್ ಜನರ ಬೆಗ್‌ರ್ ಅದರ್ಲಿ ಉಟ್ಟು! ಬಸ್ಸ್‌ಂದ ನಮ್ಮ ಓಡಾಟಕ್ಕೆ ಎಷ್ಟ್ ಅನುಕೂಲ ಆದ್ದೆ! ಹಾಂಗಾಗಿ ನಮ್ಮ ನಡೊಳ್ಕೆನ ತಿದ್ದಿಕಂಡ್, ಬಸ್ಸ್‌ನ ಮಹತ್ವನ ತಿಳ್ಕಂಡ್, ಒಟ್ಟಿಗೆ ಜವಾಬ್ದಾರಿನ್ನೂ ಮೈಗೂಡ್ಸಿಕಂಡ್ ನಮ್ಮ ಎಲ್ಲವರ ಆಸ್ತಿ ಆದ ಬಸ್‌ಗಳ ಕಾಪಾಡಿ ಕಣೊಕು.

---

**ಲೀಲಾ ದಾಮೋದರ**
'ಧಾತ್ರಿ', ಗಾಂಧಿನಗರ, ಸುಳ್ಯ, ದಕ್ಷಿಣ ಕನ್ನಡ



# ಹಾಂತೆ

**ಪ್ರಿಯಾಂಕ ತೀರ್ಥರಾಮ ಕೊಚ್ಚಿ**

ಕೊರೊನಾ ಮಾರಿಂದಾಗಿ ಎಷ್ಟೆಲ್ಲಾ ತಾಪತ್ರೆಗ ಆಗಿ ಹೋದೋಂತ ಹೇಳಿ ಸುಖ ಇಲ್ಲೆ ಬುಡಿ. ಮೊದ್ವೆ – ಮುಂಜಿನಂತ ಗಡ್ಡ್‌ನ ಕಾರ್ಯಕ್ರಮಗಳ ಸುಲಭಲಿ ಮುಗ್ಸಿ ಕೆಲವು ಜನ ಖರ್ಚ್‌ನ ವಿಸಯಲಿ ಲಾಭ ಪಡ್ಕಂಡರೆ, ಕಾಯಿಲೆ – ಕಸಾಲೆಂತ ಸಿಕ್ಕಕಾದ ಮೊದ್ದು ಸಿಕ್ಕದೆ ಕೊರೊನಾದ ನೆಪಲಿ ಬೊದ್ಕ್ ಮುಗ್ಸಿದೊವು ಇನ್ನೆಷ್ಟೋ... ಸಾಲೆ ಮಕ್ಕಳಿಗಂತೂ ಸಾಲೆಗೆ ಹೋಗ್ವ ದಾರಿನೇ ಮತ್ತೋರ್ಗ್ವಷ್ಟ್ ರಜೆ ಸಿಕ್ಕಿಬುಟ್ಟತ್.

ಮನೇಲಿ ಮಕ್ಕಳ ಆಟ, ಬೊಬ್ಬೆ, ಜಗಳ, ಕರ್ಕೊಂಬೊದು, ಬೊಯ್ಕೊಂಬೊದು ಅಕೇರಿಗೆ ದೂರ್ ತೆಕಂಡ್ ನನ್ನಕ್ಕಲೆ ಓಡಿ ಬಾದು... ಅಯ್ಯೋ ರಾಮಾ..... ಒಮ್ಮೆ ನೀವ್ಗೆ ಸಾಲೆ ಸುರಾದರೆ ಸಾಕ್‌ಂತ ನಾ ಪರ್‌ಂಚಿಕಂಡ್ ಮಕ್ಕಳ ಬೆನ್ನಿಗೆ ಎರ್ಡೆರ್ಡ್ ಏಸ್ ದುಟ್ಟು. ಮನೇಲಿರುವ ಒಂದೆರಡ್ ಮಕ್ಕಳ ನೋಡಿಕಣಿಕೆ ನೀವ್ಗೆ ಇಷ್ಟ್ ಭಜ ಆದೆ. ಸಾಲೆಲಿ ಆಸ್ ರಾಸಿ ಮಕ್ಕಳ ಮಾಸ್ಟ್ರ್ – ಟೀಚರ್‌ಗ ಹೇಂಗೆ ಆಳ್ಬುವೆನೋ ಅಂತ ನನ್ನಪ್ಪನೂ, ಅಯ್ಯೆನೂ ನಂಗೆ ಎರ್ಡ್ ಬೊಯ್ದ್ ಪುಳ್ಳಿಕಳ ಕರ್ಕೊಂಬ.

ಇಷ್ಟೆಲ್ಲಾ ಗೌಜಿ – ಗದ್ದಲಗ ಆಕಂಡ್ ಇರಿಕನ ಕಾಗಡೆಮನೆ

ಸರೋಜಕ್ಕ ಅದರ ಮಂಜನ ಕರ್ಕೊಂಡ್ ಬಾತ್. ಉಂಡನೆ ಮಂಜ.. ನಿನ್ನೆನ ಪಾಠ ನನ್ನ ಮಂಜಂಗೆ ಸರಿ ಬರ್ಕಣಿಕೆ ಆತ್ಲೆ. ನೋಡ ನೀ ಹೇಂಗೆ ಬರ್ದೊಳ ನೋಡೊಮಾಂತ ಕೇಳ್ತ್.

ನಾ ಮಕ್ಕಳಿಗೆ ನನ್ನ ಮೊಬೈಲ್ ಹಕ್ಕಲೆ ಸುಳಿಯಕೂ ಬುಡ್ತಿಲ್ಲೆ. ಈ ಆನ್ಲೈನ್ ಕ್ಲಾಸ್‌ಂದಾಗಿ ನನ್ನ ಮೊಬೈಲ್ ಅಂತೂ ಲಗಾಡಿ ಹೋಗಿ ಆತ್.. ಕ್ಲಾಸ್‌ಂತ ಹೇಳಿಕಂಡ್ ಕೊಟ್ಟೊಳೆ ಅಷ್ಟೇ. ಅದ್ಕೂ ಸರಿ ರೇಂಜ್ ಸಿಕ್ಕಿದೆನಾ ಅದೂ ಇಲ್ಲೆ. ನೆಟ್ ಆನ್ ಮಾಡಿ ಪಾಠ ಸುರಾಕನ ಬಾಗ್‌ಲ್ ದಾರಂದದ ಮೇಲೆ ಇಸಿ ಬುಡ್ದು. ಮಂಜ ಅಲ್ಲಿಂದಲೇ ಗಂಟ್ಲ್ ಎಕ್ಕ್‌ಳಿಸಿಕಂಡ್ ಬರೆದು. ಇಸಿದ ಪೊರ್ಲುಗೆ ಮೊಬೈಲ್ ಜಾರಿ ಕಾಗಡೆ ಬಿದ್ದ್ ಅದರ ಸುರ್ಪ ಅಂತೂ ನೋಡಿಕೆ ಬೊತ್ತದಂಗಾಗುಟುಂತ ನಾ ಸರೋಜಕ್ಕನಕ್ಕಲೆ ಹೇಳ್ದೆ.

ಅಷ್ಟೊತ್ತಿಗೆ ಮಂಜ ಅವನ ಮಣಭಾರದ ಚೀಲ ಎಳ್ಕಂಡ್ ಬಾತ್. ಕ್ಲಾಸ್ ತೇಳಿಕನ ಅವಂಗೆ ಆರ್ ಪಾಠಕ್ಕೇನೂ ಒಂದೇ ಪುಸ್ತಕ. ರಪ್ಪ ರಪ್ಪ ಗೀಚಿಕಣಿಕೆ. ಮತ್ತೆ ನೋಟ್ ಪುಸ್ತಕಕ್ಕೆ ಬರೆದು. ಎಲ್ಲಾ ಪುಸ್ತಕಗಳ ಸರೋಜಕ್ಕನ ಎದ್ರ್ ಸೊರ್ಗಿತ್. ಅದೆಲ್ಲಿತ್ತೋ ಮೂರ್–ನಾಕ್ ಹಾಂತೆಗ ಪುರುಪುರೂಂತ ನಮ್ಮ ಕಾಲಡಿಲೇ ಓಡಿ ಮೂಲೆ ಸೇರಿಕಂಡ. ನಂಗೆ ಹಾಂತೆ ಕಂಡರಂತೂ ಆದ್ಲೆ. ಯಪ್ಪೋಂತ ಆರ್ಭಟೆ ಕೊಟ್ಟ್ ಕುರ್ಸಿ ಮೇಲೆ ಹತ್ತಿ ನಿತ್ತ್ ಕಂಡೆ.

ಮಂಜ ಚೀಲದೊಳಗೆ ಇಣ್ಕಿ ನೋಡಿ ಅಮ್ಮಾ... ಇದರ್ಲಿ ಹಾಂತೆ, ಅದರಪ್ಪ, ಅಮ್ಮ, ದೊಡವ, ಸಣವ ಎಲ್ಲಾ ಒಳೊ. ಸಂಸಾರನೇ ಸುರು ಮಾಡ್ದ ಹಾಂಗೆ ಉಟ್ಟೊಂತ ರಾಗ ಎಳ್ತ್. ನಿಂಗೆ ಲಾಯ್ಕ್ ಇಸಿಕಣಿಕೆ ಆದುಲೆ. ಚೀಲ ಒತ್ತರೆ ಮಾಡದೆ ಎಷ್ಟ್ ದಿನ ಆತ್‌ಂತ ನಾ ಬೊಯಕನ ಅಂವ ಇಲ್ಲೆಮ್ಮಾ ನಾ ನಿನ್ನೆ ಕಾಗದ ಚೂರು, ಮಿಠಾಯಿ ಚೋಲೀಂತ ಇದ್ದದರೆಲ್ಲಾ ತೆಗ್ದ್, ಪುಸ್ತಕಗಳ ತುಂಬುಸಿ ಲಾಯ್ಕ್ ಮಾಡಿ ಜಿಪ್ ಹಾಕಿ ಇಸಿದ್‌ಂತ ಹೇಳ್ತ್. ಆಗ ಸರೋಜಕ್ಕ ಹಾಂತೆಗ ಮೀಸೆ ತೂರ್ದಲ್ಲಿ ತೂರಿಕಂಡವೆ ಗಡ ಮಂಜಾಂತ ಹೇಳಿ ಪುಸ್ತಕನ ಕೇಳಿ ತೆಕಣ್ತ್.

ಪುಸ್ತಕ ಬುಡ್ಸಿರೆ ಅದರೊಳಗೆ ಸಣ್ಣ ಸಣ್ಣ ಮೊರಿಗೊಳೂ ಒಳೊ. ಉದ್ದಕ್ಕೆ ಪಿಟ್ಟೆಪಿಟ್ಟೆಗಳೂ ಕಂಡವೆ. ಸಣ್ಣಕೆ ಎಲ್ಸಂಡೆ ಬಿತ್ತ್ ನಾಂಗೆ ಮೊಟ್ಟೆಗಳೂ ಕಂಡವೆ. ನಂಗೆ ಪಿತ್ತ ನೆತ್ತಿಗೇರ್ತ್. ಲಾಯ್ಕ್ ಇಸಿಕಣವನ ಪುಸ್ತಕದೊಳಗೆ ಹೀಂಗೆ ಇದ್ದದೆನಾ. ಈ ಮೊಬೈಲ್ ಪಾಠಲಿ ಎಂತರ

ಓದಿದೆನೋ.. ಎಂತ ಪಾಠ ಕೇಳ್ದೆನೋ.. ಸುಮ್ಮನ್ಯಾರ್ ಮೊಬೈಲ್‌ಂದಾಗಿ ಮಕ್ಕ ಹಾಳಾಗಿ ಹೋದೋಂತ ಮೊಬೈಲ್ ಕೊಡಿಕೆ ಮನ್ಸಿಲ್ಲದ ಆ ಅಸಮಾಧಾನನ ಹೊರಗೆ ಹಾಕಿದ್.

ಇತ್ತ ನೋಡಿರೆ ನಮ್ಮ ಪಟ್ಟಾಂಗಲಿ ಹಾಂತೆಗ ತಪ್ಪ್ ಸಿಕಂಡ್ ಗೋಡೆ ಕೊಡಿಗೆ ಎತ್ಯೊಳ. ಒಂದಂತೂ ಹಿಡಿತ ತಪ್ಪಿ ಪಚಕ್‌ಂತ ಮತ್ತೆ ಕೆಳಗೆ ಬೀತ್. ನಂಗೆ ಬಂದ ರೌದ್ರಲಿ ಮಾಯ್ಪುನ ಸೂಡಿ ತಂದ್ ಹಾಂತೆಗೆ ಹೊಡ್ದೆ. ಅದ್ ನೆಲಕ್ಕೆ ಅಪ್ಪಚ್ಚಿ ಆತ್. ಸರೋಜಕ್ಕಾ ಈ ಹಾಂತೆಗಳ ಕಾಟಲಿ ಬೊತ್ತ್. ಎಂತರ ಮಾಡ್ದೂಂತ ನಾ ನನ್ನ ರಾಮಾಯಣ ಸುರು ಮಾಡ್ದೆ. ಸರೋಜಕ್ಕನ ಮಜನೂ, ನನ್ನ ಮಜನೂ ಓದಿಕೇಂತ ಪುಸ್ತಕ ಚೀಲ ಹಿಡ್ಕಂಡ್ ಕೋಣೆ ಸೇರಿಕಂಡ.

ಅಲ್ಲ ಮೀನಕ್ಕ.. ಹಾಂತೆಗಳ ಕೊಲ್ಲಿಕೆ ಈಗ ಬೇಕಾದಷ್ಟ್ ಮೊದ್ದ್‌ಗ ಸಿಕ್ಕುವೆ ಅಲಾ. ಅದೊಂದು ಬೋರ್ಡ್‌ಲಿ ಬರೆವ ಚೋಕ್ ನಾಂಗೆ ಇರುವ ಲಕ್ಷ್ಮಣರೇಖೆ ಅಂತ ಸಿಕ್ಕಿದೆ. ಅದರ ಗೋಡೆಲಿ ಬರೆ ಎಳ್ದ್ ನೋಡ್‌ಂತ ಸರೋಜಕ್ಕ ಹೇಳ್ತ್. ಹಾಂತೆಗಳಿಗೆ ಇಸದ ಮೊದ್ದು ಒಂದೂ ಇಲ್ಲೆ ಮಾರಾಯ್ತಿ. ಲಕ್ಷ್ಮಣರೇಖೆ ಆತ್, ಹಿಟ್ ಸ್ಪ್ರೇ ಮಾಡಿ ಆತ್, ಬೇಗನ್ ಅಂತ ಹರ್ಲ್ ಬಿತ್ತ್ ನಾಂಗೆ (ಸಕ್ಕರೆನಾಂಗೆ) ಕಾಣುವ ಒಂದು ಹೊಡಿ ಸಿಕ್ಕಿದೆ. ಅದರ ಪೇಪರ್‌ಲಿ ಹರ್ಗಿ ನೋಡಿ ಆತ್, ಅದ್ ಬುಡು ಹಳ್ಳಿ ಮೊದ್ದುನೂ ಮಾಡಿ ಆತ್ ಹೇಳಿಕನ ಸರೋಜಕ್ಕ ಕೇಳ್ತ್ ಹಾಂತೆಗಳಿಗೂ ಹಳ್ಳಿ ಮೊದ್ದಾ... ಅದೆಂತಯಾ.. ಸತ್ಯ ಹೇಳೊಕಾರೆ ನಾ ಹಾಂತೆಗಳಿಗೆ ಮೊದ್ದು ಕೇಳದ ಜನಾನೇ ಇಲ್ಲೆ. ಮೇಗಡೆಮನೆ ಪಾತಜ್ಜಿ ಹೇಳ್ದೊ ಕೊಂದೆ ಮರಲಿ ಹೂ ಹೋಗಿ ಕಾಯಿ ಆದೆ. ಅದ್ ನೋಡಿಕೆ ಬಾಳ್‌ನ ಹಾಂಗೆ ಇದ್ದದೆ. ಅದರ ತುಂಡು ಮಾಡಿ ಇಸಿರೆ ಹಾಂತೆಗಳ ಸಂತಾನ ಮುತ್ತಿದೇಂತ ಹೇಳ್ದೊ. ಇದ್ ಹಿಂದೆನವರ ಹಳ್ಳಿ ಮೊದ್ದು ಗಡ. ಅದನ್ನೂ ಮಾಡಿ ನೋಡಿ ಆತ್. ನಾಕೇ ದಿನ. ಪಡೆಗ ಮತ್ತೆ ತುಂಬಿಕಂಡವೆ.

ಅಷ್ಟಾಕನ ಸರೋಜ ನಮ್ಮಲ್ಲಿನೂ ಹಾಂತೆಗಳ ಸಂತೆ ಕಮ್ಮಿ ಇಲ್ಲೆ ಮಾರಾಯ್ತಿ. ಮೊನ್ನೆ ಗೈಪುಗೆ ಕಾಸಿ ಹಾಕಿ ಹೊರಗೆ ಬಂದ್ ಕುದ್ದಿದ್ದೆ. ಅದ್ಕೆ ಬಾವಡೆ ಮುಚ್ಚಿದ್ ಚೂರ್ ಓರೆ ಆಗಿತ್ತ್. ನನ್ನ ಯಜಮಾನ್ರ್ ಉಂಬಕೆ ಗೈಪು ಇಕ್ಯಣಿಕನ ಕೆಂಪು ಮೆಣ್ಸ್ ನಾಂಗೆ ಒಂದು ಹಾಂತೆ ಪಾಂಬಿದೆ. ಮತ್ತೆ ಆ ಗೈಪುನ ತಿಂಬಕಾರ್ ಮನ್ಸ್ ಬಂದದೆನಾ.. ನಾ ತೀಂತೇಲೆ.

ಹಾಂತೆನಷ್ಟ್ ನಾತ ಯಾವ್ದೂ ಇಲ್ಲೆ. ವ್ಯಾ....ಕ್ ತೇಳಿ ನನ್ನೆದ್ರ್ ವಾಂಕ್ ರ್ಸಿತ್. ನಂಗೂ ಹೊಟ್ಟೆ ತೊಳ್ಸಿದಂಗಾತ್.

ಏಡ್ ಮುಟ್ಟದ ಸೊಪ್ಪಿಲ್ಲೇಂತ ಹೇಳುವಾಂಗೆ ಹಾಂತೆಗ ಹುಗ್ಗದ ಜಾಗೆನೇ ಇಲ್ಲೆ ಮಿೀನಕ್ಕ. ನಮ್ಮೊಲ್ಲಿ ಅಟ್ಟ, ಬೆಸೆಗೆ, ಗೋಡೆ ಒಟ್ಟೆ, ಮನೆ ಮಾಡ್ ಗೆ ಹಾಕಿದ ಮರದ ಒಟ್ಟೆಗಲ್ಲಿ, ಬಾಗ್ಲ್ ಸೆರೆಲಿ, ಕಿಡ್ಕೆ ಸೆರೆಲಿ, ಬೇಸಿನ್, ಗ್ಯಾಸ್ ಸ್ಟವ್ ಅಡಿ ಎಲ್ಲಿಂತೇಳಿ ಇಲ್ಲೆ. ಪೂರಾ ಕಡೆ ಒಳೋಂತ. ಮೊದ್ದ್ ಹಾಕಿಕನ ಒಮ್ಮೆ. ಮತ್ತೆ ವೊಪಾಸ್ ಸೇರಿಕಂಡವೆ. ಎಂತರ ಮಾಡ್ದು ಹೇಳ್.. ಮನೆಲಿ ಒಂದು ಕೊತ್ತಿ ಉಟ್ಟು. ಅದರ ಗುಮ್ಮ ಮೆಟ್ಟಿಕೆ. ಅಳೆಗೆಲಿ ಇದ್ದದರ ಮೊಗ್ಚಿ ತಿಂಬಕೆ ಉಸಾರ್ ಉಟ್ಟು. ಹಾಂತೆ, ಎಲಿಗ ಬಾಯಿ ಹಕ್ಕಲೆ ಓಡಾಡಿರೂ ಆ ಹಬ್ಬುಸಂಗೆ ಹಿಡೆಕಾದುಲೆ. ತಿಂದ್ ಸಾಯಕಿದ್ದದ್.... ಅಂತೆಲ್ಲ ಉದ್ದಕೆ ಬೊಯ್ಕಂಬಕನ ನಂಗಂತೂ ಮನ್ಸೊಳಗೇ ಸಮಾಧಾನ. ಇದ್ ನಮ್ಮನೆ ಸಮಸ್ಯೆ ಮಾತ್ರ ಅಲ್ಲಾ ಅಂತ.

ಯಾಕೋ ಸರೋಜಕ್ಕನವು ಹೋದ ಮೇಲೆ ಮನ್ಸ್ ಕೇಳ್ತೇಲೆ. ಹಾಂತೆಗಳಿಗೇಂತ ತಂದ ಎಲ್ಲಾ ಬಗೆ ಮೊದ್ದುಗಳ ಒಮ್ಮೆಗೇ ಮನೆ ಮೂಲೆ ಮೂಲೆಗೂ ಪ್ರಯೋಗ ಮಾಡಿ ನೋಡ್ದೆ. ಆ ದಿನಂದ ಹಾಂತೆಗ ಮಂಗಮಾಯ. ಎಡ್ಡ್ ವಾರ ಕಳ್ದರೂ ಸಣ್ಣ ಮೊರಿ ಹಾಂತೆನೂ ಪತ್ತೆ ಇಲ್ಲೆ. ಸರೋಜಕ್ಕ ಬರ್ಲಿ. ಅದ್ಕೂ ಹೀಂಗೆ ಮಾಡಿಕೆ ಹೇಳೊಕೂಂತ ಅದರ ದಾರಿ ಕಾಯ್ತಾ ಒಳೆ.

---

**ಪ್ರಿಯಾಂಕ ತೀರ್ಥರಾಮ ಕೊಚ್ಚಿ**
ಮರ್ಕಂಜ




# ಆ ಒಂದು ಊರಿನ ಹಬ್ಬದ ವಿಶೇಷತೆ

ಚೊಕ್ಕಾಡಿ ಜನನಿ ರಾಘವಯ್ಯ

ನಮ್ಮ ಊರು ಅವಂದೂರು. ಇಲ್ಲಿ ಮಾರ್ಚ್ 6ನೇ ತಾರೀಕ್ ಊರಹಬ್ಬ ನಡ್‌ದದೆ. ಆ ಹಬ್ಬ ವಿಶೇಷತೆನ ನಾನ್ ನೀವ್ಗೆ ತಿಳಿಸ್‌ತಾ ಒಳೆ. ಇಲ್ಲಿ ನಡೆವ ಹಬ್ಬಕ್ಕೆ ಫೆಬ್ರವರಿ ತಾರೀಕ್ 25ಕ್ಕೆ ಊರುನವು ಎಲ್ಲಾ ಸೇರಿ ದೇವಸ್ಥಾನಕ್ಕೆ ಹೋಗಿ ಕಟ್ಟು ಬೀಳುದುತ್ತಾ ಹೇಳಿ ಹತ್ತ್ ದಿನ ಕಟ್ಟ್ ಮಡ್‌ಗಿವೆ. ಆ ಹತ್ತ್ ದಿನಲ್ಲಿ ಊರ್‌ಲಿ ಇರೊವು ಶುದ್ದ ಮುದ್ರಿಕಲಿ





ಇರೊಕು. ಮರ ಕಡಿಯದು, ಮತ್ತೆ ಮೀನ್, ಮಾಸ ಯಾವುದು ಕೂಡ ಮಾಡಿಕೆ ಬೊತ್ತ್ ತೇಳಿ ಪದ್ಧತಿ.

ನಮ್ಮ ಅವಂದೂರುಲಿ, ಎರಡ್ ದೇವಸ್ಥಾನಗ ಒಳೊ. ಒಂದು ಗೋಪಾಲಕೃಷ್ಣ ಮತ್ತೆ ಈಶ್ವರ ಶಾಸ್ತವು. ಈ ಗೋಪಾಲಕೃಷ್ಣ ದೇವಸ್ಥಾನಲಿ ಪ್ರತಿದಿನ ಊರ್‌ನ ಬ್ರಾಹ್ಮಣ ಪೂಜೆ ಮಾಡ್‌ವೆ. ಮತ್ತೆ ಎಪ್ರಿಲ್ 14ನೇ ತಾರೀಕಿಗೆ ಬಿಸು ಸಂಕ್ರಮಣಲಿ, ಊರ್‌ನವೂ ಎಲ್ಲವೂ ಸೇರಿ ಕೃಷ್ಣ ದೇವ್ರ ಹಬ್ಬ ಮಾಡುವೆ. ಈ ಹಬ್ಬಕ್ಕೆ ಊರ್‌ಂದ ಬಾಚೆಲ್ ತೇಳಿ (ತೆರಿಗೆ) ಅಕ್ಕಿ ತರಕಾರಿ ಹಣ್ಣು ಕಾಯಿ ಕೊಟ್ಟವೆ. ಈ ಅಕ್ಕಿ ತರಕಾರಿಲಿ ಊರ್ ನವುಕೆ ಕೃಷ್ಣ ದೇವ್ರ ಹಬ್ಬಲಿ ಮಧ್ಯಾಹ್ನ ಮಹಾಪೂಜೆ ಆದ ಮೇಲೆ ಅನ್ನಪ್ರಸಾದ ವ್ಯವಸ್ಥೆನ ಊರಿನ ಮುಖ್ಯಸ್ಥರ್ ಮಾಡಿಸಿವೆ. ತಕ್ಕರ್, ಊರ್‌ನ ಎಲ್ಲಾ ಮುಖಂಡರ್ ಸೇರಿ ಮಹಾಪೂಜೆ ಮುಗ್‌ದ ಮೇಲೆ ಊಟ ಮಾಡಿ ಹಣ್ಣ್‌ಕಾಯಿ ತಕಂಡ್ ಅವರವರ ಮನೆಗೆ ಹೋದವೆ.

ಆ ದಿನ ಮಳೆ ಬರುವ ಲಕ್ಷಣ ಇದ್ದದೆ. ಊರ್‌ಲಿ ಈಶ್ವರ ಶಾಸ್ತವು ಅಯ್ಯಪ್ಪ ವಿಷ್ಣುಮೂರ್ತಿ ತೆರೆ ಇದ್ದದೆ. ಮತ್ತೆ ಎರಡನೇ ದೇವಸ್ಥಾನ ಈಶ್ವರ ಶಾಸ್ತವು. ಆ ದೇವಸ್ಥಾನಕ್ಕೆ ತೆರೆ ದೇವಸ್ಥಾನತ ಹೇಳುವೆ. ನಾನ್ ಮೇಲೆ ಹೇಳ್‌ದಂಗೆ ಈ ಹಬ್ಬಕ್ಕೆ 10 ದಿನದ ಕಟ್ಟ್ ಕೊನೆ ಎರಡ್ ದಿನ ಅಂದರೆ 9ನೇ ದಿನ ಮೇದ ಜನಾಂಗದವು ಚಂಡೆ ತಗಂಡ್ ಊರ್‌ನ ಎಲ್ಲಾ ಮನೆ ಮನೆಗೆ ಹೋಗಿ ಚಂಡೆ ಬಾರಿಸಿಕಂಡ್ ಬಾಕನ ಅವುಕೆ ಅಕ್ಕಿ ಭತ್ತ ಕೊಟ್ಟ್ ಕಳಿಸಿವೆ!

ಮತ್ತೆ 10ನೇ ದಿನ ಬೆಳಿಗ್ಗೆ 5 ಗಂಟೆ ನಮ್ಮ ಊರ್‌ನ ಭಂಡಾರ ಇರುದು ಕಡ್ಯದ ಐನ್‌ಮನೆಲಿ, ಅಲ್ಲಿ ಊರವು ಎಲ್ಲಾವೂ ಸೇರಿ ಭಂಡಾರ ತಕಂಡ್ ಊರ್ ತೆರೆ ದೇವಸ್ಥಾನಕ್ಕೆ ಹೋದವೇ ಅಲ್ಲಿ ಬಂಡಾರ, ದೇವಸ್ಥಾನದಲ್ಲಿ ಇಸಿ ಮತ್ತೆ 11.30 ಗಂಟೆಗೆ ದೇವ್ರ್‌ನ ವಿಗ್ರಹ ಹಿಡ್‌ಕಂಡ್ ಊರ್‌ನ ಆರ್ ತಕ್ಕರ್ ಮತ್ತೆ ಚಂಡೆ ಗೋಷ್ಠಿ ಒಟ್ಟಿಗೆ ಊರ್ ಜನ ಸೇರಿ ದೇವ್ರ್‌ನ ಹೊತ್ತ್ ಮೈಲ್ ದೂರದ ಅವಂದೂರು ಹೊಳೆಗೆ ಬಂದ್, ಸರಿಯಾಗಿ 12.00 ಗಂಟೆಗೆ ದೇವ್ರ್ ಮೀದ್, ಸೇರ್‌ದ ಜನಕ್ಕೆಲ್ಲ ನೀರ್ ಹಾಕಿ ಕುಷಿಪಡಿಸಿ ಹರೋವೋ ಶಾಸ್ತವು, ಹರೋವೊ ಶಾಸ್ತಾವು ಹೇಳಿಕಂಡ್ ಮತ್ತೆ ದೇವಸ್ಥಾನಕ್ಕೆ ಹೋದವೆ ಅಲ್ಲಿ ಹೋಗಿ ಅಂಬಲಮಾನಿ ಗದ್ದೆಲಿ ಊರ್‌ನ ಕಡೆಂದ್ ಬರುವ ಎತ್ತ್‌ಗಳ ಬೆನ್ನ್ ಮೇಲೆ ಅಕ್ಕಿ ಬೆಲ್ಲ ಹಾಕಂಡ್ ದೇವರ

ಮುಂದೆ ಹೇರ್ ಹಾಕಿಕಂಡ್ ಹೋದವೆ. ಅಲ್ಲಿ ದೇವಸ್ಥಾನಕ್ಕೆ ಹೋಗಿ ಸುತ್ತ್ ಬಂದ್ ಎತ್ತ್‌ಗಳ ಅವರವರ ಮನೆಗೆ ಹೊಡ್‌ಕಂಡ್ ಹೋದವೆ, ಇದ್‌ಕೆ ಎತ್ತರಾಟ ತೇಳುವೆ.

ಮತ್ತೆ ಮಧ್ಯಾಹ್ನದ ಫಲಹಾರ ಮುಗ್ಸಿ ಕಂಡ್ ಮನೆಗೆ ಬಂದ ನೆಂಟ್ರಗಳ ಕರ್‌ಕಂಡ್ 4.00 ಗಂಟೆ ಎಲ್ಲವು ಸಾರ್ತಾವು ದೇವಸ್ಥಾನಕ್ಕೆ ಹೋದವೆ. ಅಲ್ಲಿ ಸುಮಾರ್ 5 ಗಂಟೆದ 6 ಗಂಟೆ ಒಳಗೆ ಎರಡ್ ತೆರೆ ಹೊರಟದೆ. ಒಂದು ತೆರೆ ಈಶ್ವರ ಶಾಸ್ತಾವು ಮತ್ತೊಂದು ಅಯ್ಯಪ್ಪ ತೆರೆ. ಇದರ ನೋಡಿ ಸೇರ್‌ದ ಜನ ಕುಷಿ ಪಟ್ಟ್. ಮತ್ತೊಂದು ತೆರೆಗೆ ಕಾದವೆ. ಆ ತೆರೆ ವಿಷ್ಣುಮೂರ್ತಿ (ಚೌಂಡಿ) ಇದ್ ದೇವಸ್ಥಾನದ ಹಂಞ ದೂರಲಿ ಪಟ್ಟಡ ಮನೆಯವರ ಮಾನಿ ಗದ್ದೆ ಉಟ್ಟು. ಅಲ್ಲಿಂದ ಹೊರಟ್ ಬಂದ್ ದೇವಸ್ಥಾನಕ್ಕೆ ಸೇರಿದೆ. ಆಗ ಮೂರು ತೆರೆಗೆ ಒಟ್ಟಿಗೆ ಸೇರಿ ಕೊಣ್‌ದ್‌ದರ ನೋಡಿ ಸೇರ್‌ದ ಜನಗ ಕುಷಿ ಪಟ್ಟವೆ. ಅಲ್ಲಿಂದ ಹರಿಕೆಗಳ ಒಪ್ಪಿಸುವೆ. ಸೇರ್‌ದ ಜನಗಳಿಗೆ ದೇವ್ರ್ ಭಸ್ಮ ಪ್ರಸಾದ ರೂಪಲಿ ಕೊಟ್ಟವೆ. ಸೇರ್‌ದ ಜನ ಹಬ್ಬ ನೋಡ್‌ದ ಕುಷಿಲಿ ಆ ತೆರೆ ಹಂಗಿತ್ತ್, ಈ ತೆರೆ ಲಾಯಿಕ ಕೊಣಿತಿತ್ತ್ ತೇಳಿ ಕಂಡ್ ಅವರವರ ಮನೆಗೆ ಹೋದವೆ.

ಜನ ಹೊರಟಂಗೆ ತೆರೆ ಕೂಡ ದೇವಸ್ಥಾನದ ಕೆಳಗೆ ಇಳ್‌ದ್ ಪಟ್ಟಡ ಪಟ್ಟಿ ಕರೆಗಾಗಿ ಚೌಂಡಿ ದೇವರ ಬನಕ್ಕೆ ಮೂರು ತೆರೆಗ ಹೋದೊ. ಅದನ್ನ ತೆರೆ ಮುಳಿಯದುತ ಹೇಳಿವೆ. ಅಲ್ಲಿಗೆ ಹಬ್ಬ ಮುಗ್‌ದದೆ ಮತ್ತೆ ರಾತ್ರಿ ಊರ್ ಜನ ಸೇರಿ ದೇವ್ರ್‌ಗೆ ಹರಿಕೆ ಒಪ್ಪುಸುವ ಪದ್ಧತಿನ ಮುಗಿಸಿ ಕಂಡ್ ರಾತ್ರೆ ಮನೆ ಸೇರುವೆ. ಮಾರ್‌ನೇ ದಿನ ಊರ್‌ನ ತೆರೆಮಾನಿಲಿ ಎಲ್ಲವೂ ಕೂಡಿ ತೆಂಗಿನಕಾಯಿಗೆ ಕಲ್ಲ್ ಹೊಡ್‌ದ್ ಕುಷಿ ಪಟ್‌ಕಂಡ್. ಮತ್ತೆ ದೇವ್‌ರ ಭಂಡಾರ ತಗಂಡ್ ದೇಸ್ಥಾನಂದ ಒಂದು ಕಿ.ಮೀ. ದೂರಲ್ಲಿ ಇರುವ ಕಡ್ಯದ ಐನ್ ಮನೆಗೆ ತಂದ್ ಭಂಡಾರ ಮಡ್ಗಿ, ಮಾಡ್‌ದ ಪ್ರಸಾದನ ಊಟ ಮಾಡಿ ಅವರವರ ಮನೆಗೆ ಹೋಗಿ, ಮುಂದಿನ ವರ್ಷ ಹಬ್ಬ ಬಾದರ ಕಾದವೆ.

---

**ಚೊಕ್ಕಾಡಿ ಜನನಿ ರಾಘವಯ್ಯ**
ಮಡಿಕೇರಿ, ಟಿ.ಜಾನ್ ಲೇಔಟ್, ಶಕ್ತಿ ಕ್ವಾರ್ಟಸ್
7760898148




# ಅಕ್ಕಸಾಲಿಗನಂಥ ಕಳ್ಳ ಇಲ್ಲೆ, ಮಕ್ಕಿಗದ್ದೆನಂಥ ಬೆಳೆ ಇಲ್ಲೆ

ಸಂಗ್ರಹ : **ಡಾ. ಪಿ.ಕೆ. ರಾಜಶೇಖರ್**
ಅರೆಬಾಸೆಗೆ : **ಡಾ. ಕೋರನ ಸರಸ್ವತಿ ಪ್ರಕಾಶ್**

ಅಕ್ಕಸಾಲಿಗ ತನ್ನ ಸುತ್ತಿಗೆಂದ ಕುಟ್ಟುತ್ತಿದ್ದರೆ ಅದರ್‌ಂದ ಹೊರಡುವ ಸಬ್ದ 'ಕೊಟ್ಟವ ಕೆಟ್ಟ' 'ಕೊಟ್ಟವ ಕೆಟ್ಟ'ತ ಹೇಳ್ತ್ತಿದ್ದದೆತ ನಮ್ಮ ಜನಪದರ್ ಚಿನ್ನದ ಆಚಾರಿ ಅಕ್ಕನ ಚಿನ್ನಂದಾದರೂ ಕದಿಯದೆ ಬುಡುಕಿಲ್ಲೆಗಡ'ತ ಹೇಳುವೆ. ಅಕ್ಕಸಾಲಿಗರಿಗೆ ಇಂತ ಕಳಂಕ ಬಾದಕೆ ಸಂಬಂಧಿಸಿದಂಗೆ ಹಲವಾರ್ ಕಥೆಗ ಒಳೊ. ಇವುಗಳ ಸತ್ಯಾಸತ್ಯತೆ ಬಗೆಗೆ ಸರಿ ಆದ ತಿಳುವಳಿಕೆ ಹೇಳುದು ಕಷ್ಟ. 'ಅಕ್ಕಸಾಲಿಗನಂಥ ಕಳ್ಳ ಇಲ್ಲೆ, ಮಕ್ಕಿಗದ್ದೆನಂಥ ಬೆಳೆ ಇಲ್ಲೆ' ತೇಳುವ ಗಾದೆಗ ಒಂದು ಜನಪದ ಕತೆ ಜನಪದರಲ್ಲುಟ್ಟು.

ಒಬ್ಬ ವಿಶ್ವಕರ್ಮ ಗುರುತ ಕುಲಕಸುಬಾದ ಚಿನಿವಾರ ಕೆಲ್‌ಸದ ಬಗೆಗೆ ಮಕ್ಕಳಿಗೆ ವಿದ್ಯೆನ ಹೇಳಿಕೊಡತಿತ್ತ್‌ಗಡ. ಅವನತ್ತ್‌ರ ಕಲಿತಿದ್ದ ಶಿಷ್ಯರ್‌ಲಿ ಮೂರು ಹೈದಗ ಬಹಳ ಬುದ್ಧಿವಂತರಾಗಿದ್ದೊ ಗಡ. ಅವು ಬೆರ್‌ಳ್ ತೋರ್‌ಸಿರೆ ಅಂಗೈನೆ ನುಂಗುವ ಬುದ್ಧಿವಂತರ್. ಅವು ಮೂರು ಜನ ಗುರು ಹೇಳಿಕೊಟ್ಟ ವಿದ್ಯೆಲಿ ಪಾರಂಗತರಾದೊ ಗಡ. ಆಗ ಗುರುಗ 'ಮಕ್ಕಳೆ ನಮ್ಮ ಕೆಲ್‌ಸದ ಧರ್ಮ ಏನ್ ತೇಳ್‌ರೆ ಯಾರೇ ಒಡವೆ ಮಾಡಕೆ ಚಿನ್ನ ಕೊಟ್ಟರೂ ಅದರ್‌ಲಿ ಸ್ವಲ್ಪವಾದರೂ ಕದಿಯೊದು. ಈಗ ನೀವು ಚಿನಿವಾರ ವಿದ್ಯೆಲಿ ಪ್ರವೀಣರಾಗೊಳರಿ ನಿಮಿಗೆ ಒಡವೆ ಮಾಡಿಕೆ ಯಾರಾದರ್ ಚಿನ್ನ ಕೊಟ್ಟರೆ ಯಾರ್ಯಾರ್. ಎಷ್ಟ್ ಚಿನ್ನನ ಕದ್ದರೆ?ತ ಕೇಳ್‌ದೇ. ಆಗ ಮೊದಲನೆ ಶಿಷ್ಯ, 'ಆಚಾರ್ಯ, ಒಡವೆ ಮಾಡಿಕೆ ಕೊಟ್ಟವರ ಚಿನ್ನ ಮೂರು ಭಾಗ ಮಾಡಿದೆ. ಅದರ್‌ಲಿ ಒಂದು ಭಾಗ ಚಿನ್ನನ ನಾ ಮಡಗಿಕಂಡ್ ಉಳಿದ ಎರಡ್ ಭಾಗಕ್ಕೆ ನಾನ್ ತೆಗ್‌ದ್‌ಕಂಡ ಭಾಗದಷ್ಟು ತಾಮ್ರನ ಬೆರ್‌ಸಿ, ಅದ್ ಯಾರಿಗೂ ಗೊತ್ತಾಗದಂತೆ ಒಡವೆನ ಅಪ್ಪಟ ಚಿನ್ನದ ಒಡವೆನಂಗೆ ಕಾಂಬಂಗೆ ಮಾಡ್‌ನೆ'ತ ಹೇಳ್‌ತ್. ಆಗ ಎರ್‌ಡನೆ ಶಿಷ್ಯ "ಆಚಾರ್ಯ ನಾನ್ ಮೂರು ಭಾಗ ಮಾಡುದಿಲ್ಲೆ. ಎರ್‌ಡ್ ಭಾಗ ಮಾಡ್‌ನೆ. ಒಂದು

ಭಾಗ ಕದ್ದ್ ಉಳ್‌ದದ್ದಕ್ಕೆ ತಾಮ್ರ ಬೆರ್‌ಸಿ ಆಭರಣ ಮಾಡಿ ಅಪ್ಪಟ ಚಿನ್ನದ ಒಡವೆನಂಗೆ ಫಳಫಳ ಹೊಳೆವ ಒಡವೆ ಮಾಡಿ ಕೊಟ್ಟನೆತ ಹೇಳ್‌ದೆ.

ಆಗ ಎರಡನೆ ಶಿಷ್ಯ 'ಆಚಾರ್ಯ ನಾನ್ ಮೂರು ಭಾಗ ಮಾಡುದಿಲ್ಲೆ. ಎರಡ್ ಭಾಗ ಮಾಡ್‌ನೆ. ಒಂದು ಭಾಗನ ಕದ್ದ್ ಉಳ್‌ದದ್ದಕ್ಕೆ ತಾಮ್ರ ಬೆರ್‌ಸಿ ಆಭರಣ ಮಾಡಿ ಅಪ್ಪಟ ಚಿನ್ನದ ಒಡವೆನಂಗೆ ನಂಬಿಕೆ ಬರ್‌ಸಿ ಅದ ಲಕ ಲಕ ಹೊಳೆವಂಗೆ ಒಡವೆ ಮಾಡಿಕೊಟ್ಟನೆತ ಹೇಳ್‌ದೆ. ಆಗ ಮೂರನೆಯವ ಆಚಾರ್ಯ ಮೂರನೇ ಒಂದು ಭಾಗ ಆಗಲಿ, ಅರ್ಧ ಭಾಗ ಆಗಲಿ ನಂಗೆ ಯೆಡ್‌ಸುದಿಲ್ಲ. 'ನಾನ್ ಪೂರ್ತಿ ಭಾಗನೇ ಅಪಹರಿಸಿವೆ'ತ ಹೇಳ್‌ದೆ. ಮೂರನೆಯವನ ಮಾತ್ ಕೇಳಿ ಗುರುಗಳಿಗೆ ಆಶ್ಚರ್ಯ ಆದೆ. 'ಶಿಷ್ಯಾ, ಇದ್ ಹೇಂಗೆ ಸಾಧ್ಯ?'ತ ಕೇಳ್‌ಕನ ಅದಿಕ್ಕೆ ಅಂವ "ಗುರುದೇವ, ಅದನ ಹೇಳ್‌ಕೆ ಸ್ವಾರಸ್ಯ ಇರುದ್‌ಲ್ಲೆ. ಯಾರಾದರ್ ನಂಗೆ ಒಡವೆ ಮಾಡಿಕೆ ಅವಕಾಶ ಕೊಟ್ಟರೆ ನಿಮಿಗೆ ಖುದ್ದಾಗಿ ತೋರ್‌ಸಕಾತ್'ತ ಹೇಳ್‌ದೆ. ಇವನ ಪರೀಕ್ಷೆ ಮಾಡೊಕುತ ಗುರುಗಳಿಗೆ ಮನ್‌ಸ್ಸಾದೆ. ಆದರೆ ಅವಕಾಶ ಸಿಕ್ಕೊಕಲಾ? ಇಂಥ ಅವಕಾಶ ಹೇಂಗೆ ಸಾಧ್ಯತ ಗೇನ ಮಾಡತ್ತಿರ್‌ಕಾಕನ ಗುರುಗಳ ದೋಸ್ತಿ ಒಬ್ಬ ಅವರ್ನ ನೋಡಿಕೆ ಬಂದೊ. ಅವು ರಾಜನ ಆಸ್ಥಾನಲಿದ್ದ ಆಸ್ಥಾನ ವಿದ್ವಾಂಸರು. ಕಷ್ಟಸುಖ ಮಾತಾಡಿ ಆದ ಮೇಲೆ, "ಗುರುಗಳೇ, ಏನೋ ಗ್ಯಾನ ಮಾಡಿಂಡೋಳರಿ? ಏನ್‌ತ ಹೇಳಕಾಗದ?'ತ ಕೇಳ್‌ಕಾಕನ, ಗುರುಗೆ ಆಸ್ಥಾನದ ವಿದ್ವಾಂಸರಿಗೆ ಶಿಷ್ಯನ ಮನಸ್ಸನ ಇಚ್ಛೆ, ಹಂಗೇನೆ ಅದಿಕೆ ಅವಕಾಶ ಇಲ್ಲದಿರುದನ ತಿಳ್‌ಸಿವೆ. ಆ ವಿದ್ವಾಂಸರಿಗೂ ಈ ಶಿಷ್ಯನ ಸವಾಲ್ ಆಶ್ಚರ್ಯ ಅದೆ. 'ನೂರಕ್ಕೆ ನೂರರಷ್ಟ್ ಚಿನ್ನನ ಕದ್ದ್ ಅಂವ ಹೇಂಗೆ ಒಡವೆ ಮಾಡಿಕೊಟ್ಟದೆ?'ತ ಯೋಚಿಸಿದೊ. ಅಲ್ಲದೆ ಅಂಥ ಅವಕಾಶ ಸಿಕ್ಕರೆ ಹೇಳ್‌ನತ ಹೇಳಿ ರಾಜನ ಹತ್ತ್‌ರ ಬಂದ ವಿದ್ವಾಂಸರ್ ಆಚಾರ್ಯನ ಹತ್ತಿರ ಇರುವ ಶಿಷ್ಯನ ಅಪೇಕ್ಷೆನ ವಿವರ್‌ಸಿ ಹೇಳ್‌ದೇ. ರಾಜಂಗೂ ಆಶ್ಚರ್ಯ ಆಗಿ ಅವನ ಕೌಶಲನ ಪರೀಕ್ಷಿಸೊಕುತ ನಿರ್ಧರಿಸಿದೊ. ಕೂಡಲೇ ಮಂತ್ರಿಗಳ್‌ನ ಕರ್‌ಸಿ ಅವುಕೆ ಪೂರ್ಣ ವಿವರಗಳ್‌ನ ತಿಳ್‌ಸಿ, ಮಂತ್ರಿಗಳೇ ಇದಿಕ್ಕೊಂದು ತಂತ್ರನ ರೂಪ್‌ಸಿ'ತ ಹೇಳ್‌ದೊ. ಅದಿಕ್ಕೆ ಮಂತ್ರಿ 'ಪ್ರಭು ಹೇಂಗಿದ್ದರೂ ನಾವು ಚಿನ್ನದ ಸಿಂಹಾಸನವ ಮಾಡ್‌ಸೊಕುತ ಗ್ಯಾನ ಮಾಡಿಕಂಡಿದ್ದೊ ಅಲಾ. ಈ ಕೆಲ್‌ಸನ ಅರಮನೆಲಿ, ಕಟ್ಟ್‌ನಿಟ್‌ಟಾದ ಕಾವಲ್‌ಲಿ ಆ ಗುರುಗಳ

ಶಿಷ್ಯನಿಂದನೇ ಮಾಡಿಸಿರೆ ಆತ್. ಚೂರುಪಾರ್ ಚಿನ್ನನಾದರೆ ಕದಿಯಕೆ ಸಾಧ್ಯ ಇತ್ತೊ ಏನೋ. ಆದರೆ ಅಂವ ಪೂರಾ ಚಿನ್ನನೇ ಲಪಟಾಯಿಸಿನೆತ ಹೇಳಿಟು. ಪರೀಕ್ಷೆ ನಡ್‌ದೇ ಬುಡ್‌ಲಿ!'ತ ಹೇಳ್‌ದೆ.

ಶಿಷ್ಯಂಗೆ ಅರಮನೆಂದ ಕರೆಬಾತ್. ಆತ ಸಡಗರಂದ ಹೋದೆ. ಬಂಗಾರದ ಸಿಂಹಾಸನನ ಮಾಡುವ ಕೆಲ್‌ಸನ ಅವಂಗೆ ವಹಿಸಿದ್ದಲ್ಲದೆ, 'ಅರಮನೆಗೆ ಬಂದ್ ಈ ಕೆಲ್‌ಸನ ಮಾಡೊಕು. ಮೂರು ತಿಂಗಳ್‌ಲಿ ಈ ಕೆಲ್‌ಸ ಆಕು'ತ ಹೇಳುವೆ. ಅದಿಕ್ಕೆ ಅಂವ ಆರು ತಿಂಗ ವಾಯಿದೆ ಕೇಳ್‌ದೆ. ಅದಿಕ್ಕಿ ಒಪ್ಪಿಗೆನೂ ಸಿಕ್ಕಿತ್.

ಮಾರ್ನೆ ದಿನಂದ ಸಿಂಹಾಸನದ ಕೆಲ್‌ಸ ಬಾಳ ಬಂದೋಬಸ್ತ್‌ಲಿ ಪ್ರಾರಂಭ ಆತ್. ಆರು ತಿಂಗಳ್‌ಲಿ ಸಿಂಹಾಸನ ಸಿದ್ಧ ಆತ್. ರಾಜ, ಮಂತ್ರಿಗ ಗುಸು ಗುಸು ಮಾತಾಡಿಕೊಂಡೊ. ನಮ್ಮ ಕಾವಲ್‌ಲಿ ಇಂವ 'ಒಂದು ಚೂರೂ ಚಿನ್ನನ ಕದಿಯಕೆ ಸಾಧ್ಯ ಆತ್‌ಲೆ, ಗುರುಗಳ ಮುಂದೆ ಇಂವ ಮಾಡ್‌ದ ಪ್ರತಿಜ್ಞೆ ಏನಾತ್?'ತ ಸಿಕ್ಕಾಪಟ್ಟೆ ನೆಗಾಡ್‌ದೊ.

ಶಿಷ್ಯ ರಾಜರ ಬಳಿ ಬಂದ್ 'ಪ್ರಭೂ ನನ್ನ ಕೆಲ್‌ಸ ಪೂರೈಸಿತ್. ನೀವಿನ್ನ್ ಆ ಸಿಂಹಾಸನನ ಸ್ವೀಕರಿಸಕ್. ಆದರೆ ಅದನ್ನ ನೀವು ಆಸ್ಥಾನಲಿ ಪ್ರತಿಷ್ಠಾಪಿಸುದಕ್ಕೆ ಮುಂಚೆ ಊರ್‌ನ ಮಧ್ಯಬಾಗಲಿರುವ ರಾಜರಾಜೇಶ್ವರಿ ದೇವಸ್ಥಾನದ ಎದ್‌ರ್ ಇರುವ ಕೆರೆಲಿ ಮೂರು ಸಲ ಮುಳುಗಿಸಿ ರಾಜೇಶ್ವರಿ ದೇವಿನ ಮುಂದೆ ಇಸಿ ಪೂಜೆ ಮಾಡಿ ಅದನ ದೇವಿನ ಎದ್‌ರ್ ನಿಮಿಗೆ ಅರ್ಪಿಸಿನೆ'ತ ಹೇಳ್‌ದೆ. ರಾಜ 'ಹಾಂಗೆನೇ ಆಗಲಿ'ತ ಒಪ್ಪಿಕಂಡದೆ.

ಮಾರ್ನೆದಿನ ಊರ್‌ನ ಮುಖ್ಯಸ್ಥರ್, ಆಸ್ಥಾನದವು, ಊರ್‌ನ ಜನ ಎಲ್ಲವೂ ರಾಜರಾಜೇಶ್ವರಿ ದೇವಸ್ಥಾನದ ಮುಂದೆ ಬಂದ್ ಸೇರ್‌ದೊ. ಸೇವಕರ್ ರಥಲಿ ಸಿಂಹಾಸನನ ತಂದ್ ಕೆರೆನ ದಡಲಿ ಇಟ್ಟೊ. ಆ ಶಿಷ್ಯ ಕೆರೆಲಿ ಸಿಂಹಾಸನದೊಟ್ಟಿಗೆ ಮುಳ್‌ಗಿತ್. ಸ್ವಲ್ಪ ಹೊತ್ತ್‌ಲಿ ಸಿಂಹಾಸನ ಸಮೇತ ಮೇಲೆ ಎದ್ದತ್. ಹೀಂಗೆ ಮೂರು ಮೂರು ಕಡೆಲಿ ಮೂರು ಸಲ ಮುಳುಗಿ ಮೂರು ಸಲ ಸಿಂಹಾಸನದೊಟ್ಟಿಗೆ ಮೇಲೆದ್ದತ್. ಮೂರನೆ ಸಲ ಸಿಂಹಾಸನನ ದಡಕ್ಕೆ ತಾತ್. ಎಲ್ಲವೂ ಸೇರಿ ಸಿಂಹಾಸನನ ರಾಜೇಶ್ವರಿ ದೇವಸ್ಥಾನಕ್ಕೆ ಕೊಂಡೊಯ್ದೊ. ಶಿಷ್ಯ ಅದಿಕ್ಕೆ ಪೂಜೆ ಮಾಡಿ ಮಹಾರಾಜಂಗೆ ಅದನ್ನ ಭಕ್ತಿಪೂರ್ವಕವಾಗಿ ಅರ್ಪಿಸಿತ್.

ಶಿಷ್ಯ ಗುರುಗಳ ಹತ್ತ್‌ರ ಮಾಡ್‌ದ ಪ್ರತಿಜ್ಞೆ ಮಣ್ಣ್ ಪಾಲಾತ್‌ತ ಗೆದ್ದ ನೆಗ್‌ನ ನೆಗಾಡಿಕಂಡ್ ರಾಜ ಶಿಷ್ಯಂಗೆ ಸನ್ಮಾನ ಮಾಡಿ

ಉಡುಗೊರೆಗಳ್‌ನ ಕೊಟ್ಟು ಕಳ್‌ಸಿತ್. ಆಗ ರಾಜ ಮಂತ್ರಿನ ಕರ್‌ದ್, 'ಆ ವಿಶ್ವಕರ್ಮಾಚಾರ್ಯನ ಕರ್‌ಸಿ'ತ ಹೇಳ್‌ದೆ. ರಾಜರ ಆಹ್ವಾನ ಕೇಳಿ ಆಚಾರ್ಯ ಬೇಗ ಬಂದ್ 'ಏನಪ್ಪಣೆ ಪ್ರಭು?'ತ ಕೇಳ್‌ತ್. ಅದಿಕ್ಕೆ ಮಹಾರಾಜ, 'ಆಚಾರ್ಯರೇ, ನಿಮ್ಮ ಶಿಷ್ಯ ನೂರಕ್ಕೆ ನೂರು ಪಾಲ್ ಚಿನ್ನನ ಲಪಟಾಯಿಸಿನೆತ ಹೇಳಿತ್, ಇಂದ್ ನೋಡಿ ಮಾಡ್‌ದ ಪ್ರತಿಜ್ಞೆನ ಕೈಬುಟ್ಟು ನಮಿಗೆ ಈ ಸಿಂಹಾಸನನ ಮಾಡಿ ಕೊಟ್ಟುಟು. ಏನಾತ್ ಅವನ ಪ್ರತಿಜ್ಞೆ?'ತ ನೆಗಾಡ್‌ದೆ. ಆಚಾರ್ಯಂಗೆ ತನ್ನ ಶಿಷ್ಯನ ವಿಚಾರಲಿ ತುಂಬಾ ನಂಬಿಕೆಯಿತ್ತ್. ತನ್ನ ಶಿಷ್ಯನ ಸೋಲ್‌ನ ಒಪ್ಪಿಕಂಬಂಕೆ ಸುತರಾಂ ಇಷ್ಟ ಇತ್ತ್‌ಲೆ. ಸಿಂಹಾಸನನ ಒಮ್ಮೆ ಪರೀಕ್ಷೆ ಮಾಡಿ ಎದೆಯುಬ್ಬಿಸಿ ಬೀಗೆ ರಾಜನತ್ತ್‌ರ ಹೀಂಗೆ ಹೇಳ್‌ತ್. "ಮಹಾಪ್ರಭು, ನನ್ನ ಶಿಷ್ಯ ಮಾಡ್‌ದ ಪ್ರತಿಜ್ಞೆನಂಗೆ ಖಂಡಿತಾ ಗೆದ್ದುಟು. ಅಂವ ಪ್ರತಿಜ್ಞೆನಂಗೆ ನಡ್‌ಕಂಡುಟು. ಪ್ರಭೂ ಅಂವ ಮಹಾಚಾಣಾಕ್ಷ. ನೀವುಗೆಲ್ಲ ಮಂಕ್ ಬೂದಿ ಎರ್‌ಚಿ ಅಂವ ತನ್ನ ಕಾರ್ಯನ ಸಾಧಿಸಿ ತೋರಿಸಿಟು. ಪ್ರಭು ಇದ್ ಬಂಗಾರದ ಸಿಂಹಾಸನ ಅಲ್ಲ. ಇದ್ ನಕಲಿ ಸಿಂಹಾಸನತ ಹೇಳ್‌ತ್. ಆಚಾರ್ಯನ ಮಾತ್‌ನ ಕೇಳಿ ರಾಜ, ಮಂತ್ರಿ ಮತ್ತೆ ಆಸ್ಥಾನದವೆಲ್ಲ ಆಶ್ಚರ್ಯಂದ ಸಿಡ್‌ಲ್ ಹೊಡ್‌ದಂಗೆ ನಿಂತೊ. ಆಗ ಎಚ್ಚೆತ್ತ ರಾಜ, 'ಇಷ್ಟೆಲ್ಲ ಕಾವಲ್ ಇದ್ದರೂ ಅಂವ ಹೇಂಗೆ ನಕಲಿ ಸಿಂಹಾಸನನ ಮಾಡಿಕೆ ಸಾಧ್ಯ ಆತ್ ಆಚಾರ್ಯ?'ತ ಪ್ರಶ್ನಿಸಿತ್. 'ಹೇಂಗೆ ಸಾಧ್ಯತೇಳುದನ ನನ್ನ ಶಿಷ್ಯನೇ ಸಾಧಿಸಿ ತೋರ್‌ಸಿತ್ತಲ್ಲ ಪ್ರಭು?'. ಈ ಕಳ್ಳತನದ ಕೈಚಳಕ ಅದ್ಭುತ'ತ ಹೇಳ್‌ದ ರಾಜ ವಿಸ್ಮಯ ಕುತೂಹಲಗಳ್‌ಂದ ತಡ್‌ಕಂಬಕೆ ಸಾಧ್ಯ ಆಗದೆ ಆ ಕೂಡಲೆ ಶಿಷ್ಯನ ಅರಮನೆಗೆ ಬಾಕೆಹೇಳ್‌ತ್. ಶಿಷ್ಯ ಬಂದ್ ಗುರುಗಳ ಕಾಲಿಗೆ ನಮಸ್ಕರಿಸಿ ಮಹಾರಾಜರಿಗೆ ನಮಸ್ಕಾರ ಮಾಡಿ ನಿಂತ್‌ಕಂಡತ್. ಆಗ ಮಹಾರಾಜ, "ಅಯ್ಯಾ, ನಾವೆಲ್ಲ ಇಷ್ಟ್‌ಜನ ಕಾವಲಿದ್ದರೂ ನೀನು ನೂರಕ್ಕೆ ನೂರರಷ್ಟ್ ಚಿನ್ನನ ಲಪಟಾಯಿಸಿ ನಕಲಿ ಸಿಂಹಾಸನನ ಮಾಡಿ ಗುರುಗಳಿಗೆ ಕೊಟ್ಟ ಮಾತ್‌ನ ಉಳ್‌ಸಿಕಂಡೊಳ, ಇದರ್‌ಂದ ನಮಿಗೆ ಖುಸಿನೂ ಆಶ್ಚರ್ಯನೂ ಆವುಟು. ನಿನ್ನ ಕಳ್ಳತನದ ಕೌಸಲನ ಕೇಲೊಕುತ ನಮಿಗೆ ಆಸೆ ಆವುಟು"ತ ಹೇಳ್‌ಕನ, ಆ ಶಿಷ್ಯ "ಪ್ರಭೂ, ನೀವು ಮೂರು ತಿಂಗಳ ಅವಧಿಲಿ ಸಿಂಹಾಸನನ ಮಾಡೊಕುತ ಕೇಳ್‌ದಿರಿ. ಅದಿಕ್ಕೆ ನಾನ್ ಆರ್ ತಿಂಗಳ ಅವಧಿ ಬೇಕುತ ಕೇಳಿಕಂಡೆ. ಒಂದು ಸಿಂಹಾಸನ ಮಾಡಿಕೆ ಮೂರು ತಿಂಗಳ ಅವಧಿ ಸಾಕಾಗಿತ್ತ್. ಆದರೆ ನಾನ್ ಎರಡ್ ಸಿಂಹಾಸನ ಮಾಡಿಕೆ ಇತ್ತ್." 'ಎರಡ್ ಸಿಂಹಾಸನನ, ಯಾಕೆ? ಯಾರಿಗೆ?' 'ಹೇಳ್‌ನೆ ಪ್ರಭೂ,

ನಾನ್ ನನ್ನ ಗುರುಗಳಿಗೆ ಕೊಟ್ಟ ಮಾತ್‌ನ ಉಳ್‌ಸಿಕಂಬಕೆ, ಯಾಗೋಳು ಅರಮನೆಗೆ ಬಂದ್. ಬಂಗಾರದ ಸಿಂಹಾಸನದ ಮಾಡ್‌ತ್ತಿದ್ದಂಗೆ, ಅದೇ ಅಳತೆನ, ಅದೇ ಆಕಾರದ ಅದೇ ಭಾಗನ ಅಂದ್‌ರಾತ್ರಿ ನನ್ನ ಮನೆಲಿ ತಾಮ್ರದ ಲೋಹಂದ ತಯಾರಿಸ್‌ತ್ತಿದ್ದೆ. ಚಿನ್ನದ ಸಿಂಹಾಸನ ಅರಮನೆಲಿ ಪೂರ್ಣ ಆದ ದಿನನೇ ನನ್ನ ಮನೆಲಿ ನಕಲಿ ಸಿಂಹಾಸನನೂ ಸಿದ್ಧ ಆಗ್‌ತಿತ್ತ್. 'ಅದ್ ಸರಿ, ನಿನ್ನ ಮನೆಲಿದ್ದ ನಕಲಿ ಸಿಂಹಾಸನನ ನಮ್ಮ ಅರಮನೆಗೆ ಹೇಂಗೆ ಬಾಕೆ ಸಾಧ್ಯ ಆತ್?' ಪ್ರಭೂ, ನಾನ್ ನಿನ್ನೆ ರಾತ್ರಿಲಿ ನಕಲಿ ಸಿಂಹಾಸನನ ರಾಜರಾಜೇಶ್ವರಿ ದೇವಸ್ಥಾನದ ಮುಂದೆ ಇರುವ ಕೆರೆಲಿ ಮುಳುಗಿಸಿಟ್ಟಿದ್ದೆ. ಇಂದ್ ಬೆಳಿಗ್ಗೆ ಚಿನ್ನದ ಸಿಂಹಾಸನನ ಕೆರೆಲಿ ಮುಳುಗಿಸಿ ಕೆರೆನ ಒಳಗೆ ಇದ್ದ ನಕಲಿ ಸಿಂಹಾಸನನ ನಿಮಿಗೆ ಒಪ್ಪಿಸಿದೆ. ಹೀಂಗೆ ನಾನ್ ಮಾಡದೆ ಇದ್ದಿದ್ದರೆ ಗುರುದ್ರೋಹ ಆಗ್‌ತಿತ್ತಲ್ಲ. ಗುರುಗಳಿಗೆ ಕೊಟ್ಟ ಮಾತ್‌ನ ಮೀರಿಕಾದೆನಾ?' ತ ಹೇಳಿ ಮತ್ತೆ ಅವರ್‌ನ್ನೆಲ್ಲ ಕೆರೆ ಹತ್ತ್‌ರ ಕರ್‌ಕಂಡ್‌ಬಾತ್. ಕೆರೆಗೆ ಹಾರಿ ನೀರ್‌ಲಿ ಮುಳುಗಿ ಬಂಗಾರದ ಸಿಂಹಾಸನದೊಟ್ಟಿಗೆ ಮೇಲೆದ್ದತ್. ಆಗ ರಾಜಂಗೆ ಆದ ಆಶ್ಚರ್ಯ ಅಷ್ಟಿಷ್ಟಲ್ಲ. ಶಿಷ್ಯನ ಕೈಚಳಕನ ಬುದ್ಧಿವಂತಿಕೆನ ಮೆಚ್ಚಿಕಂಡ ರಾಜ ಅವನ ತನ್ನ ಆಸ್ಥಾನದ ಚಿನಿವಾರನಂಗೆ ಮಾಡಿಕಂಡದ್ದಲ್ಲದೆ ಅವನ ಸನ್ಮಾನಿಸಿ ಬಹುಮಾನ ಕೊಟ್ಟು ಸತ್ಕರಿಸಿತ್.

ಇನ್ನ್ ಮಕ್ಕಿಗದ್ದೆ ದೇವರಗದ್ದೆ. ಆದ್ದರ್‌ಂದ ಅದನ ಉಳ್‌ದ ಗದ್ದೆಗಿಂತನೂ ವಿಶೇಷ ಆಸಕ್ತಿಂದ ನೋಡಿಕಂಡವೆ. ಊಳ್‌ಕಾಕನ ಈ ಗದ್ದೆಂದಲೇ ಊಳಿಕೆ ಸುರುಮಾಡುವೆ. ನಾಟಿ ಕೂಡ ಈ ಗದ್ದೆಂದನೇ ಸುರು ಆದೆ. ಮಕ್ಕಿಗದ್ದೆ ಮೊಡುಬಾಯಿಂದ ನೀರು ಬರುವ ಮೊದಲ ಗದ್ದೆನೂ ಹೌದು. ಇಲ್ಲಿ ಬೆಳೆ ಹುಲುಸಾಗಿ ಬೆಳ್‌ದದೆ. ಇದಿಕ್ಕೆ ಒಳ್ಳೆ ಗೊಬ್ಬರನೂ ಹಾಕುವೆ. ಇಲ್ಲಿ ಬೆಳೆ ಬಾದೇ ಗೊತ್ತಾದುಲ್ಲೆ. ಹಂಗೇನೇ ಅಕ್ಕಸಾಲಿ ಕದ್ದದ್ದ್ ಕೂಡಾ ಯಾರಿಗೂ ಗೊತ್ತಾದುಲ್ಲೆ. ಈ ಹಿನ್ನೆಲೇ 'ಅಕ್ಕಸಾಲಿಗನಂಥ ಕಳ್ಳ ಇಲ್ಲೆ; ಮಕ್ಕಿನಗದ್ದೆನಂಥ ಬೆಳೆ ಇಲ್ಲೆ' ತೇಳುವ ಗಾದೆ ಬಳಕೆಲಿ ಉಟ್ಟು.

---

**ಡಾ. ಕೋರನ ಸರಸ್ವತಿ ಪ್ರಕಾಶ್**

ಪ್ರಾಧ್ಯಾಪಕರ್, ಕನ್ನಡ ವಿಭಾಗ

ಸರಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಮಡಿಕೇರಿ




# ಬನ್ನಿ ಹರಟೆ ಹೊಡಿಯೊಮೊ ಮನ್ಸ್ ಹತ್ರ ಆಕು

**ಜೈನೀರ ಕವಿತಾ ಕಿರಣ್**

ನಮ್ಮ ಮುಖಂಡರು, ಹಿರಿಯರ್ ನಮ್ಮ ಭಾಷೆ, ಸಂಸ್ಕೃತಿ ಉಳ್ಸೊಕು, ನಮ್ಮವರ್ನೆಲ್ಲಾ ಒಂದು ಮಾಡೋಕುತ ಕಷ್ಟಪಟ್ಟ್ ಅರೆಭಾಷೆ ಸಾಹಿತ್ಯ ಸಮ್ಮೇಳನಗಳ್ನ, ಬೇರೆ ಬೇರೆ ಜಂಬರಗಳ ಮಾಡುವೆ. ಅಲ್ಲಿ ಎಲ್ಲರ ಹತ್ರ ಇದ್ದವೆ. ಆದರೆ ಮನ್ಸ್?

ಕೆಲವ್ಕೆ ಅರೆಬಾಸೆಯವಂತ ಹೇಳಿಕಣಿಕೆ ಹಿಂಜರಿಕೆ ಇದ್ದದೆ. ಯಾವುದಾದರ್ ಸಾರ್ವಜನಿಕ ಜಂಬರಕೆ, ಒಂದು ಶಾಲೆ ಜಂಬರಕೆ, ಬಸ್‌ಸ್ಟ್ಯಾಂಡ್‌ಗಳಲ್ಲೋ ಹೋದರೆ. ಅಲ್ಲಿ ನೀವ್ ಕೆಲವರ ಪರಿಚಯ ಮಾಡಿಕಂಡ್ ಲಾಯಿಕ್‌ಲಿ ಮಾತಾಡ್ಸಿರೆ. ನಮ್ಮವುತ ಗೊತ್ತಾಗಿ ನೀವು ಅರೆಭಾಷೆಲಿ ಮಾತಾಡಿಕೆ ಸುರು ಮಾಡ್ರೆ ಅವು ಮೆಲ್ಲ ದೂರ ಹೋಕೆ ಸುರು ಮಾಡುವೆ. ಹಂಗೆ ಯಾವುದಾದರ್ ಸರ್ಕಾರಿ ಕಚೇರಿಗೆ ಅಥ್ವಾ ಇನ್ಯಾವುದೇ ಕಛೇರಿಗೆ ನಿಮ್ಮ ಕೆಲಸ ಮಾಡ್ಸಿಕಣಿಕೆ ಹೋದರೆ, ಅಲ್ಲಿ ಲಾಯಿಕ್‌ಲಿ ಮಾತಾಡಿಕಂಡಿದ್ದ ಸಿಬ್ಬಂದಿ ನೀವು ಅರೆಭಾಷೆಯವುತ ಗೊತ್ತಾದಂಗೆ ಸದ್ದಿಲ್ಲದೆ ಇದ್ದ್ ಬುಟ್ಟವೆ. ನಮ್ಮವುತ ನೆಂಟಸ್ತನ ಹೇಳಿಕಂಡ್ ಏನ್ ಕೊಡಿಕಿಲ್ಲೆತೇನೋ ಗೊತ್ಲೆ. ಇದ್ರಲ್ಲಿ ಕೆಲವಾದರೂ ನಿಮ್ಮ ಅನುಭವಕೆ ಬಂದಿರ್ದು. ಆದರೆ ಎಲ್ಲವೂ ಹಿಂಗೆ  ಮಾಡ್ದುಲೆ ಬುಡಿ.

ಅರೆಭಾಷೆ ಸಮ್ಮೇಳನ ಇಲ್ಲರೆ ಅರೆಭಾಷೆ ಜಂಬರಕ್ಕೆ ಹೋಗಿ ಅಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ, ಆಟೋಟ ಸ್ಪರ್ದೆತ ಎಲ್ಲಾ ಕಡೆ ಓಡಾಡಿ ನಾಲ್ಕ್ ಜನ ಪರಿಚಯನೂ ಆಗಿದ್ದದೆ. ಜಂಬರ ಮುಗ್ದ ಮೇಲೆ ನಮ್ಮ ಮೆಜಾರಿಟಿ ಬಾರಿ ಉಟ್ಟುತ ಚಪ್ಪಾಳೆ ತಟ್ಟಿ, ಬೀಗಿಕಂಡ್ ಬಂದವೆ. ಮಾರ್ನೆ ದಿನ ಕಚೇರಿಗೆ ಹೋಕಾಕನ ನಿನ್ನೆ ಮಾತಾಡ್ದವೇ ನಾಯಿ ಹಿಡಕಂಡ್ ರೋಡ್‌ಲಿ ಹೋತಿದ್ದವೆ. ನಾವು ಓ ಇವು ಗೊತ್ತಲ್ಲ, ಮಾತಾಡ್ಸೊಮೊತ ಹಲ್‌ಕಿರ್ದರೆ ನೋಡಿಯೂ ನೋಡದಂಗೆ ಹೋಗಿ ಮುಖ ಭಂಗ ಮಾಡುವೆ.

ಈ ಮಾತಾಡಿಕೆ ತಪ್ಸಿಕಂಡ್ ದೂರ ಓಡ್ದುರ ಬಗ್ಗೆ ಹಿಂಗೂ ಕಾರಣ ಇರ್ದುತ ಅನ್ಸಿದೆ. ಅದ್ ಎಂಥಾತೇಳ್ರೆ ಕೆಲವು ಜನಗ ಮನೆ ಹೆಸ್ರ್ ಕೇಳಿ ಲೋಕಾಭಿರಾಮ ಆಗಿ ಮಾತಾಡ್ದೆ ಬುಟ್ಟು, ನಿನ್ನ ಅಪ್ಪನ ಮನೆ ಹೆಸ್ರೆಂತ, ಅವರ ತಂಗಿನ ಮಗಳ್ನ ಎಲ್ಲಿಗೆ ಕೊಟ್ಟದ್‌ತಾ ಇಡೀ ಕುಲಗೋತ್ರ ಜಾಲಾಡ್ಸಿ ಬುಟ್ಟವೆ. ಹೆಂಗಪ್ಪ ಇವರ ಬಾಯಿಂದ ಬುಡ್ಸಿಕೊಂಬೊದುತ ಪರ್ದಾಡೊಕು. ಅಲ್ಲದೆ ನಾವ್ ಮರಿಯೋಕುತಿದ್ದ ಸಂಗತಿಗಳ್ನ ಕೆದ್‌ಕಿ ಅಯ್ಯೊ ಪಾಪ ಹಿಂಗೆ ಆಕಾಗದಿತಲತ ಅನುಕಂಪನೂ ತೋರ್ಸುವೆ. ಅವರ ಖಾಸಗಿ ವಿಷ್ಯ ಬುಟ್ಟು ಬೇರೆ ಮಾತಾಡ್ರೆ ಜನನೂ ಬೆರಿಯವೇನೋ ಅಂತ ನಂಗನ್ಸಿದೆ.

ನಮ್ಮವು ತುಂಬಾ ದೊಡ್ಡ ದೊಡ್ಡ ಹುದ್ದೆಗಳಲ್ಲಿ ಅಧಿಕಾರಿ ಆಗಿ ಸೇವೆ ಸಲ್ಲಿಸ್ತಿದ್ದವೆ, ನಾವ್‌ಗೆ ಅದ್ ಗೊತ್ತಾದು ಅವು ನಿವೃತ್ತ ಆದ ಮೇಲೇನೆ. ಸುರೂಗೆ ಗೊತ್ತಿದ್ದರೆ ಪಾಪದವ್ ಏನಾರ್ ಸಹಾಯನಾರ್ ತಕಣಕ್. ನಮ್ಮಲ್ಲಿರುವ ಸ್ಥಿತಿವಂತರ್, ವಿದೇಶಲಿರುವವು ಎಲ್ಲಾ ಸೇರಿ ಚಾರಿಟಿ ನಿಧಿನ ಶುರು ಮಾಡ್ರೆ, ಇಲ್ಲದವ್ಕೂ ಹಂಞ ಸಹಾಯ ಆದೆ. ನಮ್ಮ ಬಾಷೆ ಬಗ್ಗೆ ನಾವ್‌ಗೆ ಅಭಿಮಾನ ಇರೋಕು. ಮೊದ್ಲ್ ನಾವ್ ಮನ್ಸ್‌ಲಿ ಒಂದಾಕು, ಇಲ್ಲದಿದ್ದರೆ ಎಷ್ಟ್ ಜಂಬರಗಳ ಮಾಡ್ರೂ ಪ್ರಯೋಜನ ಇಲ್ಲೆ. ನಾವ್ಗೆ ಅಧಿಕಾರ, ಯೌವನ ಇರ್ಕಾಕನ ಹಂಞಾರ್ ಸಹಾಯ ಮಾಡ್ನೊ. ಯಾರ್‌ಸ ಹೋಕಾಕನ ಏನೂ ತಕಂಡ್ ಹೋದುಲೆತೇಳ್ದು ಎಲ್ಲವ್ಕೂ ಗೊತ್ತಿರೋ ಸತ್ಯ. ಏನ್ ಹೇಳ್ರೇ?

**ಅನ್ನದಾನಗಳಿಂದ, ಮುನ್ನ ದಾನಗಳಿಲ್ಲ,**
**ಅನ್ನಕ್ಕೆ ಮಿಗಿಲು ಇನ್ನಿಲ್ಲ, ।**
**ಜಗದೊಳಗೆ**
**ಅನ್ನವೇ ಪ್ರಾಣ ಸರ್ವಜ್ಞ॥**

---

**ಜೈನೀರ ಕವಿತಾ ಕಿರಣ್, ಬಾಳುಗೋಡು**
**ಕವಿತಾ ಎ.ವೈ.**
ಡಿಂಪಲ್‌ಕಿರಣ್ ಜೆ.ಹೆಚ್.
ಆಶೀರ್ವಾದ ನಿಲಯ, ಬಿಎಸ್.ಎನ್.ಎಲ್ ಕ್ವಾಟ್ರಸ್ ಎದುರು,
ರಾಧಕೃಷ್ಣ ಬಡಾವಣೆ, ಗೌಡ ಸಮಾಜ ರಸ್ತೆ,
ಕುಶಾಲನಗರ., ಸೋಮವಾರಪೇಟೆ ತಾಲೂಕು, ಕೊಡಗು ಜಿಲ್ಲೆ. – 571234
ಮೊ.ಸಂಖ್ಯೆ : 8105531615

# ಒಬಮಾ

(ಇದ್ ಕೊರೊನಾ ಕಾಲದ ಕತೆ – ಒಂದು ಕುಸಾಲ್‌ನ ಕತೆ)



ಸೀತಾರಾಮ ಕೇವಳ

2020ರ ಮಾರ್ಚಿ ತಿಂಗ. 'ನೂರು ವರ್ಸಕ್ಕೊಮ್ಮೆ ಇಂತದ್ ಬಂದದೆಗಡ, ಮೊಂಯಿಸರ ಪೂರ ಸಂತಾನ ಮುತ್ತ್‌ಸಿದೆಗಡ' ತೇಳುವಂತ ಸುದ್ದಿ, ಸದ್ದ್‌ಗಳೊಟ್ಟಿಗೆ ಬಂದಿತ್ತ್ 'ಕೊರೊನ' ಕಾಯ್ಲೆ. ಜನಂಗ ಹೆದ್‌ರಿಯೆ ಸಾಯಕೆ ಸುರಾಗಿತ್ತ್. ಆಗ ಅಜ್ಜಪ್ಪ ಒಬ್ಬ ಹೇಳ್ತಿದ್ದೊ, 'ನನ್ನ ಅಜ್ಜ ಹೇಳ್ತಿದ್ದೊಣ, ಅಂದೊಮ್ಮೆ ಪ್ಲೇಗ್ ಬಂದಿತ್ತ್‌ಗಡ. ಊರ್‍ಲಿ ಅದ್ ಬಂದಾಕನ ಜನಂಗ ಸಾಯಕೆ ಸುರಾತಿತ್ತ್‌ಗಡ. ಹಾಂಗೆ ಸಾಯಕೆ ಸುರಾದ ಕೂಡ್ಲೆ ಬೊದ್ಕಿದ್ದವೆಲ್ಲ ಮನೆನ ದೂಡಿ ಹಾಕಿ, ಶಬರಿಮಲೆಗೆ ಹೋಗವರಾಂಗೆ ತಿರ್ಗಿಸಾನೂ ನೋಡದೆ ಒಡ್ಡೇ ಓಡ್ತಿದ್ದೊಗಡ. ಈಗಳೂ ಹಾಂಗೆನೇ ಆದ್ದೇಂತ'. ಅಜ್ಜಪ್ಪ ಹೇಳ್ದರ ಕೇಳಿಯೇ ನಂಗೆ ಬಿಸ್‌ರ ಬಾಕೆ ಸುರಾದಂಗ್ಯಾತ್‌ಂತ. ಅದ್ಕೆ ಸರಿಯಾಗಿ ಗವರ್ಮೆಂಟ್ ಕಡೆಂದ ಮೈಕ ಕಟ್ಟಿ ಹೇಳಿಕೆ ಸುರು ಮಾಡ್ದೊ 'ನಾಳೆ ಬೆಳ್ಗೆ ಆರ್ ಗಂಟೆಂದ ಯಾರುಸಾನೂ ಹೊರೆಗೆ ಬಾಕಿಲ್ಲೆ. ವಾರಕ್ಕೊಮ್ಮೆ ಜೀನ್ಸ್, ತರಕಾರಿ, ಮಾಸದಂಗಡಿಗಳ



ಬಾಗ್ಲ್ ತೆಗೆಕೆ ಹೇಳುವೆ. ಆಗ ಹೋಗಿ ಬೇಕಾದ್ದರೆಲ್ಲ ತಕಂಕು. ಮೊದ್ದಿಗೆ, ಆಸ್ಪತ್ರೆಗೆ ಬೇಕಾರ್ ಸರಿಯಾದ ದಾಕ್ಲೆ ತೋರ್ಸಿ ಜನಂಗ ಹೋಕ್' ತೇಳಿ.

ಇದ್ ಆದ ಮರ್ದಿನನೆ ಸುರಾಗಿತ್ತ್ ನೋಡಿ ಟಿ.ವಿ.ಲಿ, ರೇಡ್ಯಲಿ, ಪೇಪರ್‌ಲಿ, ವಾಟ್ಸ್ಯಾಪ್‌ಲಿ, ಫೇಸ್‌ಬುಕ್‌ಲಿ, ಇನ್‌ಸ್ಟಾಗ್ರಾಂಲಿ, ನ್ಯೂಸ್ ಆ್ಯಪ್‌ಗಳ್ಳಿ, ಆಗಾಗ ಅಂಗ್ಡಿಗಳಕ್ಕಲೆ ಸಿಕ್ಕ್‌ತಿದ್ದ ಲೊಟ್ಟೆಪುಟ್ಟಂಗ, ದಳ್ಬಾಯಿ ದುಗ್ಗಮ್ಮಂಗಳ ಬಾಯಿಲಿ ಎಲ್ಲ. ಎಲ್ಲಿ ಹೋದೊರುನು, ಆಲ್ಲಿರೆನು ತರಾವರಿ ಸುದ್ದಿಗ. 'ಕೊರೊನ ರಂಬೂಟನ್ ಹಣ್ಣ್‌ನಂಗೆ ಇದ್ದದೆಗಡಯ', 'ಅನಾನಸ್‌ನ ನೋಡಿ ಕೊರೊನನ ನೋಡ್ದು ಬೇಡಗಡ, ತೇಟ್ ಹಂಗೆಗಡ', 'ಕೊರೊನಕ್ಕೆ ಮೊದ್ದೇ ಇಲ್ಲೆಗಡ', 'ಕೊರೊನ 27 ಫೀಟ್ ದೂರ ಹಾರ್ದೆಗಡ', 'ಮಾಸ್ಕ್, ಪಿಪಿಇ ಕಿಟ್ ಹಾಕೆಂಡೇ ಹೊರೆಗೆ ಹೋಕಡ', 'ಸುಮ್ಮನಾರ್ ಹೊರೆಗೆ ಹೋದರೆ ಪೋಲೀಸ್ ಹೊಡ್ವವೆಗಡ', 'ಮೀನ್ ಮಾಸಲಿ ಸಾನು ಕೊರೊನ ಬಂದದೆಗಡ', 'ದುಡ್ಡುನಸಾನು ಬಿಸ್‌ಲಿಲಿ ಒಣ್ಗ್‌ಸಿ ಒಳೆಗಿಸಕಡ', 'ಎಂತದೇ ಸಾಮಾನ್ ತಂದರೂ ಅದರ ಬಿಸ್‌ಲಿಲಿ ಇಸಿ ಒಣ್ಗ್‌ಸಿಯೇ ಒಳೆಗೆ ತರೊಕಡ', 'ಗಂಡ–ಹೆಣ್ಣ್, ಅಯ್ಯೆ–ಮಂಜ, ಅಪ್ಪ–ಮಗ ಆದರೊನು ಮುಟ್ಟಿಕಂಕಾದ್‌ಗಡ', 'ಸುಂಟಿ–ಬೆಳ್ಳುಳ್ಳಿ ಕಸಾಯ ದಿನಕ್ಕೆ ಮೂರೊತ್ತು ಕುಡೆಕಡ', 'ಬಿಸ್ನೀರ್ ಆವಿ ಮೂಸೊಕಡ' ಹಿಂಗೆಲ್ಲ. ಇದೆಲ್ಲದಂದರ್ದ ಬೆಚ್ಚ ಆಗುವಂತದ್ ತೇಳ್ರೆ 'ಐವತ್ತ್ ದಾಟಿದವರ ಆಸೆನೆ ಇಲ್ಲೆಗಡ. ಅವೆಲ್ಲ ಹೋದ್ದೆಗಡ' (ನಂಗೆ ಈಗ 55 ಆತ್‌ಂತ!!!). ಕೊರೊನ ಹಿಡ್ದ್ ಸತ್ತವರ ಹೆಣಗಳೆಲ್ಲ ನಾಯಿನ ಹೊಂಡಕ್ಕೆ ಹಾಕುದಂದರ್ದಳೂ ಕಡೆಲಿ ಗುಂಡಿಗೆ ಇಡ್ದೊರ ಟಿ.ವಿ.ಲಿ ನೋಡಿ, ಪೇಪರ್‌ಲಿ ಓದಿ ಒಟಾರೆ ಎಲ್ಲವು ದೇವ್ರಿಗೆ ಒಂದೇ ಹರ್ಕೆ ಹೊರ್ತಿದ್ದದ್‌ಂತೇಳ್ರೆ 'ಎಂತದೇ ಆದರೂ ಕೊರೊನ ಹಿಡ್ದ್ ಸಾಯೊದು ಒಂದು ಬಗೆ ಬೇಡ ದೇವ್ರೇ' ಅಂತ. ಹೀಂಗೆ ಬಂಜನು ಬಂಜಲಿ ದಿನಗ ಹೋತಿದ್ದೊಂತ. ನಾನು ಸಾನು ಸಾಯಕನ ಮುಟ್ಟ ಬೊದ್ಕಿನೆ ತೇಳಿ ಗ್ರೈಸಿಕಂಡ್ ದಿನ ನೂಕ್‌ತಾ ಇದ್ದೆ.

ಎರ್ಲಿ, ನಾ ಹೇಳಿಕೆ ಹೊರ್ಟದ್ 'ಒಬಮಾ'ನ ಕತೆನ. ನಮ್ಮ ಮನೆಂದ ಹಂಞ ಎಡ್ದ್‌ಗೆ ಮಾರ್ಗದ ಮೂಲೆಲಿ ಇದ್ದ ಟೇರೀಸ್ ಮನೆಲಿ ಒಬ್ಬ ಮೊಯಿಂಸ ಉಟ್ಟು. ಅಂವನ ಹೆಸ್ರ್ 'ಸುಬ್ರಾಯ'. ಅಂವ ಉಟ್ಟಲೆ ಬಾರಿ ಕೆಣಿಯ. ವಟಾರದವೆಲ್ಲವೂ ಅಂವನ ಬಗೆಲಿ ಹೇಳ್ದು ಒಂದೇ ಮಾತ್ 'ಅಂವ ಅರೆಂಜನಾಂಗಿದ್ದಂವಯ. ಹಿಡೆಕೆಮನಿ ಸಿಕ್ಕದ್. ಅಂವ ಯಾವ

ಮೋಟೆಲಿ ಹುಕ್ಕ್ ಯಾವ್ದರ್ಲಿ ಹೊರ್ಟದೆ ತೇಳಿ ಯಾರಿಗೂ ಹಿಡೆಕೆ ಬೊತ್ತು'ಂತ. ಕೊರೊನಂದಾಗಿ ಲಾಕ್‌ಡೌನ್ ಆಗಿ ಸಾಮಾನ್, ತರ್ಕಾರಿ ತಾಕೆ ನಾವೆಲ್ಲ ಬಾತಿದ್ದ ಬಂಜ ನೆನ್ನಿರೆ ಈಗಳೂ ಕಣ್ಣ್‌ಲಿ ನೀರೊಡ್ದದೆಂತ. ಎಷ್ಟುದ್ದಕ್ಕೆ ಸಾಲ್ ನಿತ್ತ್ ನಿತ್ತ್ ಹೆಂಗಾರ್ ನಾವು ಅಂಗ್‌ಡಿ ಬಾಗ್‌ಲ್‌ಗೆ ಎತ್ತಿಕನ ಸುಮಾರ್ ಸಾಮಾನ್‌ಗ ಮರ್ತೇರ್ ಹೋತಿದ್ದೊ. ಮನೆಲಿ ಬಂದಾಕನ 'ಅದರ ತಾತ್ಲೆನಯಾ. ...' ಆಂತೇಳಿ ಹೆಣ್ಣ್ ಕೇಳಿಕನ್ನೇ ನೆಂಪು 'ಹ್ಞಾಂ... ಅದೂ ಬೇಕಿತ್ತ್'ಂತ!!! ಆದರೆ ನಮ್ಮಾಚೆನ ಸುಬ್ರಾಯಂಗೆ ಇಂತ ತಾಪತ್ರೆನೇ ಇತ್ಲೇಂತ. ಅಂವನಕ್ಕಲೆ ಒಂದು ಒಟ್ಟೆ ಕಾರ್. ಅಂವಂಗೆ ಮೂರು ಮಕ್ಕ. ದೊಡ್ಡದ್ ಏಳ್ನೆ, ನಡೂದ್ ನಾಕ್ನೆ, ಅಕೇರಿಯಂವ ಎರ್ಡ್ನೆ. ಅಪ್ಪನೂ ಒಟ್ಟಿಗೆ ಒಳೊ. ಇಂವಂಗೆ ಸುಮಾರ್ ನಮೂನೆನ ತರ್ಕಾರಿ, ಸಾಮಾನ್‌ಗ ಬೇಕೂಂತಾದರೆ ಅಂವನ ಕೆಣಿ ಗೊತ್ತುಟ ನೀವ್ಗೆ. ಮೂರು ಮಕ್ಕಳ್ನೂ, ಅಪ್ಪನನೂ ಕರ್ಕಂಡ್ ಕಾರ್‌ಲಿ ಪೇಟೆಗೆ ಹೋದು. ಒಟ್ಟು ಐದ್ ಜನ ಆದೊಲೆ. ದಿನ್‌ಸಿ ಸಾಮಾನ್ ಆಗಲಿ, ತರ್ಕಾರಿ ಆಗಲಿ ಎಲ್ಲ ಬಗೆಗಳ ಪಾಲ್ ಮಾಡಿ ಐದ್ ಪಟ್ಟಿ ಮಾಡ್ದು. ಅಂವನನ್ನೂ ಸೇರ್ಸಿ ಎಲ್ಲವ್ಕೆ ಒಂದೊಂದು ಚೀಟ್‌ನ ಕೊಡ್ದು. ಎಲ್ಲವರ ಚೀಟ್‌ಲಿನೂ ಒಂದು ದಿನ್‌ಸಿ ಸಾಮಾನ್, ಒಂದು ತರ್ಕಾರಿ ಐಟಮ್ ಹಿಂಗೆಲ್ಲ ಇರ್ತಿತ್ತ್. ಅಂಗ್‌ಡಿಂದ ಐವತ್ತ್ ಮೀಟರ್ ದೂರಲೇ ಇಂವನ ಕಾರ್ ಸ್ಟೋಪ್. ಅಲ್ಲಿಂದ ಎಲ್ಲವೂ ಬೇರೆ ಬೇರೆನೇ, ಗುರ್ತನೇ ಇಲ್ಲದವರಾಂಗೆ, ನಡ್ಕಂಡ್ ಅಂಗ್‌ಡಿನಕ್ಕಲೆ ಹೋದು. ಸುರೂ ಇಂವ ಹೋಗಿ ಕ್ಯೂನ ದಾಟಿ ಎದ್‌ರ್ ಹೋಗಿ 'ಅಣಾ ನಂಗೆ ಒಂದು ಬಗೆ ಮಾತ್ರ. ಕಾಲ್ ಕೇಜಿ ಬೆಳ್ಳುಳ್ಳಿ ಕೊಡಿ' ತೇಳಿ ಆಕನ ಅಂಗ್‌ಡಿಯವನೂ ಸಾಮಾನ್ ಕಟ್ಟುವ ಹೈದನೊಟ್ಟಿಗೆ 'ಇಂದಪ್ಪಾ ಕಾಲ್ ಕೆ.ಜಿ. ಬೆಳ್ಳುಳ್ಳಿ ಇವ್ಕೆ ಕೊಡಿ' ತೇಳಿ ಕರ್ದ್ ಹೇಳ್ತಿತ್ತ್. ಅಂಗ್‌ಡಿಯವುಸಾನು ಒಂದು ಬಗೆ ಮಾತ್ರ ಬೇಕಾದವ್ಕೆ ಸಾಮಾನ್ ಕೂಡ್ಲೆ ಕೊಡ್ಸುವೆ. ಅವ್ಕೆ ಚೀಟ್ ಬರೆಕೆ ಕೆಲ್ಸ ಇಲ್ಲೆ, ರೇಟ್ ಲೆಕ್ಕ ಹಾಕಿ ಟೋಟ್ಲ್ ಮಾಡಿಕಿಲ್ಲೆಲೆ. ವ್ಯವಹಾರ ಬೇಗ ಆದೆಲೆ. ಬಾಕಿದ್ದವ್ಕುನು ಬಾರಿ ತೊಂದರೆ ಏನೂ ಆದುಲೆಲೆ. ಬೆಳ್ಳುಳ್ಳಿ ತಕಂಡ್ ಸುಬ್ರಾಯ ಅಲ್ಲಿಂದ ಜಾರ್‌ಕನ ಅವನಪ್ಪ 'ಮೋಂಟಣ್ಣ' ಅಲ್ಲಿಗೆ ಎತ್ತಿಕಂಡ್ 'ದನಿಗಳೆ ನಂಗೆ ಒಂದು ಬಗೆ ಮಾತ್ರ. ಎರ್ಡ್ ಕೆ.ಜಿ. ಬೆಳ್ತಿಗೆ'. ಅಪ್ಪ ಹೋಗ್ಯಾಕನ ಸುಬ್ರಾಯನ ದೊಡ್ಡ ಮಗ ವಿಶಾಲ ಬಂದ್ 'ಅಣಾ ನಂಗೆ ಒಂದು ಬಗೆ ಮಾತ್ರ. ಅರ್ಧ ಕೆ.ಜಿ.

ಮೆಣ್ಸ್' ತೇಳಿ ಅದರ ತಕಂಡ್ ಅದ್ ಪುಸ್ಕ ಪೀಂಕಿತ್. ಆಗಳೆ ಪ್ರತ್ಯಕ್ಷ ಆತ್ ನಡುವಣ್ತಿ ರೋಹಿಣಿ. ಬಾತ್ ಸುರು ಮಾಡ್ತ್ 'ಅಂಕಲ್ ನಂಗೆ ಒಂದು ಬಗೆ ಮಾತ್ರ. ಒಂದು ಕೆ.ಜಿ. ಬೆಲ್ಲ'. ಬೆಲ್ಲನ ನೇಲ್ಸಿಕಂಡ್ ಅದ್ ರಟ್ಟಿದ ಕೂಡ್ಲೆ ಅಕೇರಿಯಂವ, ರಾಹುಲ್, ರೆಡಿ. 'ಅಂಕ್‌ಲೂ, ನಂಗೆ ಒಂದು ಬಗೆ ಮಾತ್ರ. ಅರ್ಧ ಕೆ.ಜಿ. ಬೇಳೆ'. ಅಂವನ ಬೇಳೆ ತಕಂಡ್ ಅಂವ ಕಾರ್‌ನಕ್ಕಲೆ ಎತ್ತಿಕಾಕನ ಅಜ್ಜ, ಅಪ್ಪ, ಅಕ್ಕಂದರ್ ಎಲ್ಲವೂ ಅವ್ವವು ತಂದ ಸಾಮಾನ್‌ಗಳ ಡಿಕ್ಕಿಲಿ ಹಾಕಿಸಿ ಕೈಲಿದ್ದ ಚೀಟ್‌ಗಳ ನೋಡ್ತಾ ಇದ್ದೊ, ತರ್ಕಾರಿ ಅಂಗ್‌ಡಿಲಿ ಕ್ಯೂ ದಾಟಿ ಹೋಗಿ ಕೇಳುವ 'ಒಂದು ಬಗೆ' ಯಾವ್ದು ತೇಳಿ!!! ರಾಹುಲ್‌ನೂ ಅಂವನ ಚೀಟ್ ಬುಡ್ಸಿ ನೋಡಿ ಆಕನ ಕಾರ್ ತರ್ಕಾರಿ ಅಂಗ್‌ಡಿಂದ ಐವತ್ತ್ ಮೀಟರ್ ದೂರಲಿ ನಿತ್ತಾಗಿತ್ತ್. ದಿನ್‌ಸಿ ಅಂಗ್‌ಡಿಲಿ ಮಾಡ್ದಂಗೆನೇ 'ಒಂದು ಬಗೆ ಮಾತ್ರ' ಸೂತ್ರಲಿ ಐದ್ ಜನ ಸೇರಿ ಸೋಂತೆ, ಕಾಯಿ ಮೆಣ್ಸ್, ಟೊಮೆಟ, ಬಟಾಟೆ, ಬೀಟ್‌ರೂಟ್‌ಗಳ ತಕಂಡೊ.

ಎರ್ಡ್ ಮೂರು ವಾರಂದ ನಮ್ಮ ಆಚೀಚೆ ಮನೆವು ನೋಡ್ತಾ ಒಳೊ ಸುಬ್ರಾಯನ ಕತೆನ. ಸಾಮಾನ್ ತಾಕೆ ಹೋದರೆ ಅರ್ಧ ಗಂಟೆ ಒಳಗೆ ಅಂವಂಗೆ ಬೇಕಾದ್ದರೆಲ್ಲ ತಕಂಡ್ ಮನೆಗೆ ವಪಾಸ್ ಎತ್ತಿದೆ. ನಾವೆಲ್ಲ ಹೋದರೆ ಎರ್ಡ್ ಮೂರು ಗಂಟೆ ಅಲ್ಲದೆ ಬಾಕೆ ಆದುಲೆ. ಇದ್ ಹೇಂಗೆಂತೇಳಿ ಎಲ್ಲವ್ಕೂ ವಿಸ್ಮಯ. ಒಂದು ದಿನ ನಾ ಕನ್ನಡ ಟಿ.ವಿ. ಚಾನೆಲ್‌ನವು ಇಂಟರ್ವ್ಯೂ ಮಾಡ್ದಂಗೆ ಇಂವನ ಮಾತಾಡ್ಸಿದೆ. 'ನೀ ಹೇಂಗೆ ಮಾರಾಯಾ ಅಷ್ಟೆಲ್ಲ ಸಾಮಾನ್ ತಕಂಡ್ ಅರ್ಧ ಗಂಟೆನೊಳಗೆ ವಪಾಸ್ ಮನೆಗೆ ಬಂದಿಯಾಂತ?'. ನನ್ನ ಪ್ರಶ್ನೆಗೆ ಸುಬ್ರಾಯ ಉತ್ತರ ಬಾಯಿ ತೆಗೆಕನ ಕೆಳಗೆಮನೆನ ವಸಂತಣ ಅಲ್ಲಿಗೆ ಬಂದೊ. ಸುಬ್ರಾಯನ ನೋಡಿ 'ಓಯ್ ಒಬಮಾ, ಹೆಂಗೊಳರಿಯ?' ತೇಳಿ ಮಾತಾಡ್ಸಿದೊ. ಸುಬ್ರಾಯ ಜರ್ಸಿ ಹಸ್‌ನಾಂಗೆ ಹೊಟ್ಟೆನ ಆಡ್ಸಿಕಂಡ್ ಬಿದ್ದ್ ಬಿದ್ದ್ ನೆಗಾಡಿಕೆ ಸುರು ಮಾಡ್ತ್. 'ಎಂತ ಮಾರಾಯ ಕತೆ' ತೇಳಿ ಕೇಳ್ರೆ ಸುಬ್ರಾಯಂಗೆ ಮಾತಾಡಿಕೆನೇ ಆದುಲೆ, ನೆಗಾಡ್ದು ಒಂದೇಂತ. ತಿರ್ಗಿ ವಸಂತಣನೊಟ್ಟಿಗೆ ಕೇಳ್ದೆ 'ಎಂತಯ ವಸಂತಣ ಒಬಮಾ ತೇಳ್ರೆ?'. ಅವುಸಾನು ಎರ್ಡ್ ಮೂರು ನಿಮಿಷ ನೆಗಾಡಿ ಮತ್ತೆ ಗೇರ್‌ಗೆ ಹಾಕಿ ಹೇಳಿಕೆ ಸುರು ಮಾಡ್ದೊ. "ಈ ಸುಬ್ರಾಯನ ಕೆಣಿ ಗೊತ್ತುಟ ನಿಂಗೆ.

ತರ್ಕಾರಿ, ಸಾಮಾನ್‌ಗಳ ತಾಕೆ ಹೋಕನ ಇಂವ ಮನೆಲಿದ್ದವರೆಲ್ಲ ದಿಬ್ಬಣ ಕರ್ಕಂಡೇ ಹೋದೆ. ಇಂವನೂ ಇಂವನ ಸಂಸಾರದವುನೂ ಒಟ್ಟು ಐದ್ ಜನ ಹೋಗಿ ಅಂಗ್‌ಡೆದ್‌ರ್ ಎಷ್ಟುದ್ದದ ಕ್ಯೂ ಇದ್ದರುನೂ ಏಡ್‌ಗಳಾಂಗೆ ಸೀದಾ ಹುಕ್ಕಂಡ್ ಎದ್‌ರೇ ಹೋದವೆ. ಒಬ್ಬಾದ ಮೇಲೆ ಮತ್ತೊಬ್ಬ. ಎಲ್ಲವರ್ದುನೂ ಒಂದೇ ಬಾಸೆ 'ನಂಗೆ ಒಂದು ಬಗೆ ಮಾತ್ರ' ತೇಳಿ. ಇದೆಲ್ಲ ಇಂವಂದೇ ಟ್ರೈನಿಂಗ್, ಇಂವನ ಅಪ್ಪಂಗೂ ಮಕ್ಕಳಿಗೂ. ನಾ ಮೊನ್ನೆ ಬೆಳ್ಗೆ ಆರ್ ಗಂಟೆಗೆ ಹೋಗಿ ಮಂಗೇಶಿ ಸ್ಟೋರ್‌ಲಿ ಕ್ಯೂ ನಿತ್ತಂವ ಸಾಮಾನ್ ತಕಂಡ್ ಹೊರ್ಡ್‌ಕನ ಗಂಟೆ ಎಂಟ್ ಮುಕ್ಕಾಲ್. ಈ ಇಂವ ಕಳ್ಳ ಏಳ್ ಕಾಲಕ್ಕೆ ಬಾತ್ ಏಳ್‌ವರೆ ಆಕನ ಅಪ್ಪ ಮಕ್ಕಳ ಬೇರೆ ಬೇರೆ ಕಳ್ಸಿ ಬೇಕಾದ್ದರ ಪೂರ ಪೂಜಿಕಂಡ್ ಹೋಗಿನೂ ಆತ್. ಏನ್ ಮಾಡ್ದು ನನ್ನ ಹೆಣ್ಣ್‌ಗೆ ಸೊಂಟ ಬೇನೆ, ಅದ್ಕೆ ಬಾಕಾದುಲೆ. ಮಂಜಂದರ್ ಇಬ್ಬರು ಇದ್ದವು ಒಬ್ಬ ಅಮೆರಿಕಲಿ, ಒಬ್ಬ ಆಸ್ಟ್ರೇಲಿಯಲಿ. ಮಗ ಗಂಡನೊಟ್ಟಿಗೆ ಇಂಗ್ಲೆಂಡ್‌ಲಿ. ಅಮ್ಮ ಪೋರ್ಲುಲಿ ಹೋಗಿ ವರ್ಸ ಒಂಬತ್ತ್ ಕಳ್ತಲೆ. ಅಪ್ಪನ ಆಶ್ರಮಲಿ ಬುಟ್ಟ್ ನಾಕ್ ವರ್ಷ ಆತ್. ಇಷ್ಟೊತ್ರೆಗೆ ಒಮ್ಮೆನೂ ಆಶ್ರಮಕ್ಕೆ ಹೋಕೆ ಆತ್ಲೆ, ಯಾಗೋಳು ಪುರ್ಸೊತ್ತೇ ಆಗಟ್ಲೇಂತ. ನಾನೇ ಬಂಜ ಬರೊಕಷ್ಟೆ. ಎರ್ಲಿ ಓಲಾಯಣೊಡೊಂಜಿ ಪಿಡ್ಕಾಯಣ ತೇಳಿ ತುಳುಲಿ ಹೇಳ್ದಾಂಗೆ ಅಂವನ ಕತೆ ಹೇಳಿಕೆ ಹೋಗಿ ನನ್ನ ಕತೆ ಎಂತಕೆ ಅಲಾ?"

ಹೌದೌದು ವಸಂತಣ, ಅದ್... ನೀವು... ಅಂವನ... 'ಒಬಮಾ' ತೇಳ್ದರಿ. ಇಂವ ಎಂತ ಅಮೆರಿಕ ಅಧ್ಯಕ್ಷ ಆಗಿದ್ದವಂಗೆ ಸಮ್ಮಂದನಾ? ಆಂತ ಕೇಳ್ದಕ್ಕೆ ವಸಂತಣ ಹೇಳ್ದೊ "ಅಂಗ್‌ಡಿಗೆ ಹೋದರೆ ಅಂವಂದ್ ಒಂದೇ ಸೂತ್ರ ನೋಡು, 'ಒಂದು ಬಗೆ ಮಾತ್ರ.' ಅದರ್ನೆ ನಾ ಹಂಞ ಗುಡ್ಡು ಮಾಡಿ ಹೇಳ್ದ್ಯ ಒಬಮಾ, ಆಂತೇಳ್ರೆ ಒಂದು ಬಗೆ ಮಾತ್ರ". ಅದರ ಕೇಳಿ ನೆಗಾಡಿ ನೆಗಾಡಿ ಹೊಟ್ಟೆ ಬೇನೆ ಆಗಿ ನಾ ಮತ್ತೆ ಪುತ್ತೂರಾಯ ಡಾಕ್ಟ್ರಕ್ಕಲೆ ಮೊದ್ದು ತಕಂಡ್ ಈಗ ಉಸಾರೊಳೆ.

---

**ಸೀತಾರಾಮ ಕೇವಳ**
ಪ್ರಾಂಶುಪಾಲ, ವಿದ್ಯಾರಶ್ಮಿ ವಿದ್ಯಾಲಯ, ಸವಣೂರು.
ಮೊಬೈಲ್: 9448725813




# ಆಕಾಶ ಮತ್ತೆ ಚಂದ್ರು

## ಭಾಗ 1

ವಿಶ್ವನಾಥ ಎಡಿಕೇರಿ

'ಏ... ಚಂದ್ರು... ಕತ್ತಲೆಲಿ ಕುದ್ದ್ ಕಂಡ್ ಚಾಳೆಮರ ತುದಿನ ಎಸ್ಟ್ ನೋಡಿಯ... ಒಳಗೆ ಬಂದ್ ಕೈಕಾಲ್ ಮೊಕ ತೊಳ್ದ್, ಪುಸ್ತಕ ಓದಿಕ... ಹಾಳ್ ಕರೆಂಟ್ ಮದ್ಯಾನ ಹೋದ್ ಈಗ ಬಂದ್ ಮಿಣ-ಮಿಣತ ಹೊತ್ತಿಕಂಡುಟ್ಟು. ಇಂದ್ ಅಮಾಸೆ ಬೇರೆ...'ತ ಅಮ್ಮ ಅಡಿಗೆಮನೆಲಿ ಗೊಣಗಾಡಿಕಂಡ್ ಕರಿಯಕನ, ಅರ್ಧ ಗಂಟೆಂದ ಕತ್ತಲೆ ಆಕಾಸಲಿ ನಕ್ಷತ್ರಗಳ ನೋಡಿಕಂಡಿದ್ದ ಚಂದ್ರು ಹೈದ, 'ಬಂದೆ ಅಮ್ಮಾ...'ತ ಹೇಳಿಕಂಡ್ ಬೇನೆ ಆಗಿ ಬಚ್ಚಿ ಹೋಗಿದ್ದ ಕುತಿಗೆನ ಬೆರಳ್‌ಲಿ ನೀಂಬಿಕಂಡ್ ಅಂಗಳ ಮೂಲೆನ ಕಕ್ಕಟ್ಟ್‌ಂದ್ ಎದ್ದ್ ಮನೆ ಒಳಗೆ ಹೆಜ್ಜೆ ಹಾಕಿತ್.

ಅಮ್ಮಂಗೆ ಎಂತ ಗೊತ್ತುಟು...! ಅಮಾಸೆಗೆ ನಾಕ್ ದಿನ ಹಿಂದೆ-ಮುಂದೆನ ರಾತ್ರಿಗ ಕೆಲವುಕೆ ಹೆದ್ರಿಕೆ ಆದರೆ, ಚಂದ್ರುಗೆ ಮಾತ್ರ 'ಮಕ್ಕ ಹುತ್ತೇರಿಲಿ ಪಿಟಾಕಿ ಹೊಟ್ಟುಸುವಷ್ಟು ಕುಸಿ'. ಆಗ, ಆಕಾಶದ ನಕ್ಷತ್ರಗಳ ನೋಡಿಕೆ ಒಳ್ಳ ಸಮಯ. ಬೇರೆ ದಿನಗಳಲ್ಲಿ ಚಂದ್ರನ ಬೆಳ್ಕ್‌ಂದಾಗಿ ನಕ್ಷತ್ರಗೆಲ್ಲಾ ಮಂಕಾಗಿ ಕಂಡವೆ. ಲೈಟ್ ಬೆಳ್ಕ್ ಇದ್ದರೆ ಇನ್ನೂ ಕಷ್ಟ. ಆಕಾಶದ ತುಂಬಾ ಮಿನುಗುಟ್ಟುವ ನಕ್ಷತ್ರಗ; ಅದರ್ಲಿ ವಿಜ್ಞಾನ ಪುಸ್ತಕಲಿ ವಿವರಿಸುವ ಗ್ರಹಗ ಯಾವ್ದು. ನಕ್ಷತ್ರಗ ಯಾವ್ದು. ರಾಶಿ ಚಕ್ರತ ಹೇಳುದು ಎಂತ. ರಾಶಿ ಚಕ್ರಲಿ ಲೆಕ್ಕ ಹಾಕುವ ಇಪ್ಪತ್ತೇಳ್ ಮುಖ್ಯ ನಕ್ಷತ್ರಗ ಮತ್ತೆ ಉತ್ತರ ದಿಕ್ಕ್‌ಲಿ ದ್ರುವ ನಕ್ಷತ್ರ ಎಲ್ಲಿಟ್ಟು, ಆಕಾಶಕೆ ತೂತ್ ಬಿದ್ದಂಗೆ ಮಿನುಗುವ ಸಾವಿರಾರ್ ನಕ್ಷತ್ರಗಳ ಕತೆ ಏನ್ - ಎತ್ತ ಎಲ್ಲ ಹತ್ತನೇ ಕ್ಲಾಸ್ ಓದುವ ಚಂದ್ರುಗೆ ಗೊತ್ತುಟ್ಟು. ಇದಿಕೆ ಕಾರಣ, ಒಮ್ಮೆ ಅವರ ಸ್ಕೂಲಿಗೆ,



ಖಗೋಳ ವಿಜ್ಞಾನಿಗ ಒಬ್ಬರ್ ಬಂದಿರ್ಕನ ಆಕಾಶದ, ನಕ್ಷತ್ರಗಳ ಬಗ್ಗೆ ಒಂದು ಒಳ್ಳೆ ಭಾಷಣ ಮಾಡಿ, ಅಂದ್ ರಾತ್ರಿ ಅವು ಆರ್ ಸೆಲ್‌ನ ಉದ್ದದ ಟಾರ್ಚ್ ಲೈಟ್ ಬೆಳ್ಕ್‌ನ ಆಕಾಶಕೆ ಬುಟ್ಟ್ ಕಂಡ್ ಯಾವ ಯಾವ ರಾಶಿ ಎಲ್ಲಿ ಉಟ್ಟು, ಯಾವ ಗ್ರಹಗ ಯಾವ ರಾಶಿಲಿ ವಳೊ. ಆಗ ಕಾಣ್ತಾ ಇರುವ ಗ್ರಹಗಳ ಹೆಸ್ರ್. ಹತ್ರದ ನಕ್ಷತ್ರಗ, ದೂರದ ಗ್ಯಾಲಕ್ಸಿಗ, ಅವುಗಳಿಗೆ ಭೂಮಿಂದ ಇರುವ ದೂರ ಎಲ್ಲ ವಿವರಿಸ್‌ಕನ ಚಂದ್ರುಗೆ ಒಂದು ಹೊಸ ಲೋಕಕೆ ಹೋದಂಗೆ ಆತ್. ಇಂದ್‌ನ ಖಗೋಳ ವಿಜ್ಞಾನಕ್ಕೂ, ನಮ್ಮ ಪೂರ್ವದವರ ಪಂಚಾಂಗ ಪದ್ಧತಿಗೂ ಸಂಬಂಧ ಇದ್ದರೂ, ಪಂಚಾಂಗ ಸ್ವಲ್ಪ ಮಟ್ಟಿಗೆ ಭವಿಷ್ಯ – ಜ್ಯೋತಿಷಗಳಿಗೆ ಜೋತುಬಿದ್ದ್ ಮೂಢನಂಬಿಕೆಗೆ ದಾರಿ ಮಾಡ್‌ತಿತ್‌ಂತ ಗೊತ್ತಾತ್. ದೊಡ್ಡಂವ ಆದಮೇಲೆ, ಖಗೋಳ ವಿಜ್ಞಾನಿ ಆಗಿ ತುಂಬಾ ಸಾಧನೆ ಮಾಡುಕುತ ಮನ್ಸ್‌ಲೆ ತೀರ್ಮಾನ ಮಾಡಿಕಂಡತ್ತ್.

ಅಡಿಗೆ ಮನೆ ಬಾಗ್‌ಲ್ಲಿ ಒಮ್ಮೆ ನಿಂತ್ ಒಳಗೆ ತಲೆ ಹಾಕಿ ನೋಡಿತ್ ಚಂದ್ರು. ಅಮ್ಮ ಒಲೆ ಮೇಲೆ ಇಸಿದ ಚೆಟ್ಟಿಲಿ ಎಂತದೊ ಗೈಪು ಕೊಜ–ಕೊಜತ ಬೇಯಿತಿದ್ದದರ ಸೆಡೆಲಿ ತಿರ್ಗಿಸ್ಕಂಡಿತ್ತ್. ಅಡಿಗೆ ಮನೇಲಿ ಹಾಕಿದ್ದ ಹಳೆ ಕಾಲದ ಬಲ್ಬು ಮಸಿ ಹಿಡ್ದ್; ಸಿಂಗಲ್ ಫ್ಯೂಜ್ ಕರೆಂಟ್‌ಂದ ಸೀಮೆಣ್ಣೆ ದೀಪಕ್ಕಿಂತ ಕಡೆ ಆಗಿ ಮಿನ್ಗ್ ತಿತ್ತ್. ಅದಕ್ಕಿಂತ ಹೆಚ್ಚ್ ಬೆಳ್ಕ್. ದಗ–ದಗತ ಉರಿತ್ತಿದ್ದ ಸೌದೆ ಒಲೆಂದ ಬರ್ತಿತ್ತ್. ಅಂವ ಮನೆ ಹಿಂದೆ, ಅಂಗಳ ಮೂಲೆಲಿ ಇದ್ದ ಮೀಯುವ ಗುಡ್ಡಕೆ ಹೋಗಿ, ಹಂಡೆಲಿದ್ದ ಬಿಸಿ ನೀರ್‌ನ ಚೊಂಬಲಿ ಗೋಂಚಿ ಕೈಕಾಲ್ ಮೊಕ ತೊಳ್ಕಂಡ್, ಅಲ್ಲೇ ನೇಕೆಲಿದ್ದ ಟೌಲ್‌ಂದ ಪೂಜಿಕನ್ಡ್ ಒಳಗೆ ಬಂದ್ ಬ್ಯಾಗ್‌ನ್ದ ಪುಸ್ತಕ ತಗ್‌ದ್ ಓದಿಕೆ ಸುರು ಮಾಡಿತ್. ಸುಮಾರ್ ಹೊತ್ತು ಆಗಿ, ಅಂಗಡಿ ಕಡೆ ಹೋಗಿದ್ದ ಪೊಪ್ಪ ಬಂದ ಮೇಲೆ; ಅಮ್ಮ ಇಬ್ಬನ್ರೂ ಊಟಕೆ ಕರ್ತ್....

ಹಂಗೆ ನೋಡಿರೆ ಓದುವ ಮಕ್ಕಳ ಬುಡಿ, ಓದಿದ ದೊಡ್ಡವುಕು ಆಕಾಶದ ತಿಳುವಳಿಕೆ, ನೂರಕ್ಕೆ ಒಬ್ಬಂಬಗೊ ಇಬ್ಬರಿಗೊ ಇದ್ದರೆ ಹೆಚ್ಚ್! ನಾವು ಯಾಗ ಆಕಾಶ ನೋಡುದು...? ಕಾಪಿ, ಅಡಿಕೆನ ಅಂಗಳಲಿ ಒಣಗಿಕೆ ಹಾಕಿರ್ಕನ ಮಳೆ ಬಂದ್ ನೆಂದ್ ಹೋದೂತ ಚಿಂತೆಲಿ ಹಣೆಗೆ ಕೈಕೊಟ್ಟ್ ಒಮ್ಮೆ ಆಕಾಶನ ನೋಡಿರೆ, ಮತ್ತೆ ತೋಟಕೆ ನೀರ್ ಹಾರ್ಸಿಕೆ ಹೊಳೆ, ಕೆರೆ ನೀರಿಲ್ಲದೆ ಒಣಗಿ ಹೋಕನ ಮಳೆ ಬಂದರೆ ಆದುತ ನೋಡಿವೆ. ಸೂರ್ಯ ಚಂದ್ರ ಹುಟ್ಟುದು ಮುಳುಗುದು, ಅಮಾಸೆ ಹುಣ್ಣಿಮೆ ಅದರ ಪಾಡಿಗೆ ಅದ್ ಆದೆ. 'ಆಕಾಶ ನೋಡಿಕೆ ನೂಕು ನುಗ್ಗಲು ಯಾಕೇತ' ಒಂದು ಗಾದೆ ಸ ಉಟ್ಟು. ಇನ್ನ್ ರಾತ್ರಿ ಆಕಾಶನ ನೋಡಿಕೆ ಎಂತು ಉಟ್ಟು...?

ಆದರೆ ನಮ್ಮ ಹಿರಿಯವುಕೆ ರಾತ್ರಿನ ಆಕಾಸ, ನಕ್ಷತ್ರ, ಗ್ರಹಗಳ ತಿಳುವಳಿಕೆ

ನಾವು ಓದಿದವಿಕ್ಕಿಂತ ಬಹಳ ಜಾಸ್ತಿ ಗೊತ್ತಿತ್ತ್. ನಮ್ಮ ಪಂಚಾಗ ಪದ್ಧತಿ ಸುಮಾರ್ ಸಾವಿರದ ಐನೂರು ವರ್ಸಗಳಿಗಿಂತ ಹಿಂದೆ ಬಳಕೆಗೆ ಬಂದುಟ್ಟುತ ಹೇಳಿರೆ ನಮಿಗೆ ನಂಬಿಕೆ ಆದುಲೆ. ಯಾಕೂ ಬೇಡ. ಇಂದಿಗೆ ಇಷ್ಟ್ ದಿನಕೆ ಸಂಕ್ರಮಣ, ಇಷ್ಟ್ ದಿನಕೆ ಅಮಾಸೆ-ಹುಣ್ಣಿಮೆ, ಕಿಡಾಸ ಯಾಗ, ಸುಗ್ಗಿ, ಪಗ್ಗು, ಬೇಸಗೆ, ಕಾರ್ತಿಂಗ, ಆಟಿ ಯಾವ ಸಂಕ್ರಮಣಂದ ಎಲ್ಲಿವರೆಗೆ, ಯುಗಾದಿ ಯಾಗ, ಬಿಸು ಹಬ್ಬ ಎಸ್ಟ್ ದಿನ ಉಟ್ಟುತ ಬಾಯಿಲೇ ಪಟ್ಟಿ ಮಾಡಿ ಕ್ಯಾಲೆಂಡರ್ ನಂಗೆ ನಮ್ಮ ಅಜ್ಜಿಕ ಹೇಳ್ ಕನ. ನಾವು ಬಾಯಿ ಬುಟ್ಟ್ ಕಂಡ್ ಅವರ್ನ ನೋಡಿದ್ ಉಟ್ಟು! ಈಗ ನಮಿಗೆ ಕೆಲವು ಸಲ ಇಂದ್ ಎಂತ ದಿನ, ತಾರಿಕ್ ಎಸ್ಟ್‌ತ ಗೊತ್ತಿಲ್ಲದೆ, ಬೇರೆವರ್ನ ಕೇಳೊಕು, ಇಲ್ಲದಿದ್ದರೆ ಜೋಬುಲಿ ಇರುವ ಮೊಬೈಲ್ ತೆಗ್ದ್ ನೋಡುವ ಪರಿಸ್ಥಿತಿ ಉಟ್ಟು. ನಮ್ಮ ದೇಶದ ಅನೇಕ ಮಹಾಪಂಡಿತರಿಗೆ ಸಾವಿರಾರ್ ವರ್ಷಗಳ ಹಿಂದೆ ಖಗೋಳ ವಿಜ್ಞಾನ ಅಂದರೆ ಆಕಾಶದ ಬಗ್ಗೆ ಒಳ್ಳೆ ತಿಳುವಳಿಕೆ ಇತ್ತ್. ಆರ್ಯಭಟ್ಟ, ಭಾಸ್ಕರಾಚಾರ್ಯ, ವರಾಹಮೀರ ಮೊದಲಾದವು ಇದರ ವಿಸಯಲಿ ತುಂಬಾ ಅಭ್ಯಾಸ ಮಾಡಿ. ತಾಳೆ ಒಲಿಲಿ ಬರ್ದ್ ಇಸಿದ ದಾಖಲೆಸ ಉಟ್ಟು.

ಚಂದ್ರು ಹತ್ತನೇ ಕ್ಲಾಸ್ ಓದ್ತಾ ಇದ್ದ ವರ್ಸ ನಮ್ಮ ದೇಶದ ವಿಜ್ಞಾನ ಸಂಸ್ಥೆ. 'ಇಸ್ರೋ' ನಮ್ಮ ಉಪಗ್ರಹ ಚಂದ್ರನ ನೆಲ, ಮಣ್ಣ್. ನೀರ್ನ ಅಂಶ ಪರೀಕ್ಷೆ; ಹಿಂಗೇ ಕೆಲವು ಪರೀಕ್ಷೆ ಮಾಡಿಕೆ ಆಕಾಶ ನೌಕೆನ 'ಚಂದ್ರಾಯಣ 2' ಹೆಸ್ರ್‌ಲಿ ಅಲ್ಲಿಗೆ ಹಾರ್ಸಿತ್ತ್. ಇದಕ್ಕಿಂತ ಕೆಲವು ವರ್ಸದ ಹಿಂದೆ 'ಚಂದ್ರಾಯಣ 1' ತ ಹೇಳುವ ಒಂದು ನೌಕೆನ ಅಲ್ಲಿಗೆ ಹಾರ್ಸಿ, 'ಚಂದ್ರನ ಆಕಾಶಲಿ' ಹಾರಾಡಿ. ಅದರ ದ್ರುವ ಪ್ರದೇಶಲಿ ಮಂಜುಗಡ್ಡೆ ರೂಪಲಿ ನೀರ್ ಉಟ್ಟುತ ಕಂಡ್ ಹಿಡ್ದ ಸಾದನೆ ಮಾಡಿತ್ತ್. ನಾವು ಈಗಾಗಲೇ ಮಂಗಳನಲ್ಲಿಗೆ ಒಂದು ಆಕಾಶನೌಕೆನ 'ಮಂಗಳಾಯಣ'ನ ಯಶಸ್ವಿಯಾಗಿ ಕಳ್ಸಿದಲ್ಲದೆ, ಮುಂದೆ ಪುನಃ, ಚಂದ್ರನಲ್ಲಿಗೆ ಕಳ್ಸುವ ಆಕಾಶನೌಕೆಲಿ ಮನ್ ಸರ್ನ ಅಂದರೆ ಗಗನಯಾತ್ರಿಗಳ ಸಮೇತ ಕಳ್ಸಿ. ಅಲ್ಲಿ ನಮ್ಮ ಸಂಶೋಧನೆ-ಕಾರ್ಬಾರ್ ಮಾಡಿ, ವಾಪಸ್ ಭೂಮಿಗೆ ಬರುವ ಪ್ಲಾನ್ ಮಾಡ್ತಾವಳೊ. ಹಿಂಗೆ ಆಕಾಶಕೆ, ಬೇರೆ ಗ್ರಹಗಳಿಗೆ ನೌಕೆಗಳ ಕಳ್ಸುದರಲ್ಲಿ ಕೆಲವೇ ಕೆಲವು ದೇಶಗಳಿಗೆ ಮಾತ್ರ ಶಕ್ತಿ-ಸಾಮರ್ಥ್ಯ ಉಟ್ಟು. ಅಮೇರಿಕಾ, ರಷ್ಯ, ಫ್ರಾನ್ಸ್, ಚೀನಾ, ಜಪಾನ್ ದೇಶಗಳ ಬುಟ್ಟರೆ ನಮ್ಮ ಭಾರತ ದೇಶ ಮಾತ್ರ ಈ ಸಾಧನೆ ಮಾಡ್ತಾ ಉಟ್ಟು. ಆದರೆ ನಮ್ಮ ದೇಶದ ವಿಶೇಷತೆ ಎಂತತ ಹೇಳಿರೆ; ಬೇರೆ ದೇಶಗಳಿಗಿಂತ ಕಡಿಮೆ ಖರ್ಚ್‌ಲಿ ನಮ್ಮ ಆಕಾಶ ನೌಕೆಗಳ ಹಾರ್ಸುದು. ನಿಮಿಗೆ ಗೊತ್ತಿದ್ದಂಗೆ, 1969ನೇ ಇಸವಿಲೆ ಅಮೆರಿಕಾದವು ಚಂದ್ರನ ಮೇಲೆ ಇಳ್ದ್. ಅಲ್ಲಿ ನಡ್ದಾಡಿ. ಅಲ್ಲಿ ಬರಿ ದೂಳು-ಮಣ್ಣ್ ಬುಟ್ಟರೆ ನೀರ್

ಇಲ್ಲೆತ, ಬಾಕನ ಒಂದಷ್ಟ್ ಚಂದ್ರನ ಮಣ್ಣ್‌ನ ಪರೀಕ್ಷೆ ಮಾಡಿಕೆ ತಂದಿದ್ದೊ. ಐವತ್ತು ವರ್ಸದ ಹಿಂದೆ ಅಮೇರಿಕಾದವು ಬರಿ ಎಂಟ್ ದಿನಲಿ–ನಾಕ್ ದಿನ ಹೋಕೆ, ನಾಕ್ ದಿನ ಬಾಕೆ – ಚಂದ್ರನ ಮೇಲೆ ತಿರ್ಗಾಡಿ ಬಂದೊಳೊ. ಆದರೆ ನಮ್ಮ ಚಂದ್ರಾಯಣ 2 ಆಕಾಶನೌಕೆ ಬೂಮಿನಿಂದ ಹೊರ್ಟ್ ಚಂದ್ರನ ಹಕ್ಕಲೆ ಹೋಕೆ ಸುಮಾರ್ ನಲ್ವತ್ತೈದ್ ದಿನ ಪ್ರಯಾಣ ಮಾಡಿಟ್ಟು. ನಮ್ಮ ನೌಕೆ ಬಾರಿ ನಿದಾನಲಿ ಹೂಗುಟ್ಟುತ ಮನ್ಸಿಗೆ ಬಾದು. ನಿಜ ವಿಷಯ ಎನುತ ಹೇಳಿರೆ, ಐವತ್ತು ವರ್ಸ ಹಿಂದೆ, ನಾ ಮುಂದೆ... ತಾ ಮುಂದೆತ ಅಮೇರಿಕಾ ಮತ್ತೆ ರಸ್ಯ ದೇಶದವುಕೆ ಚಂದ್ರನ ಮೇಲೆ ಮನ್ಸರ ಸಮೇತ ಇಳಿಯದರಲ್ಲಿ ಪೈಪೋಟಿ ಇತ್ತ್. ನೀರ್ ನಂಗೆ ದುಡ್ಡು ಖರ್ಚ್ ಮಾಡಿ, ರಶ್ಯದವು ಸ್ಪುಟ್ನಿಕ್, ಅಮೇರಿಕಾದವು ಅಪೋಲೋ ನೌಕೆಗಳ ಒಂದರ ಮೇಲೆ ಇನ್ನೊಂದು ಕಳ್ಸಿ. ಕಡೆಗೆ ಅಲ್ಲಿಂದ ಏನೂ ಲಾಭ ಇಲ್ಲೆತ ಸುಮ್ಮನೆ ಆಗಿ ಈಗ ಬ್ಯಾರೆ ಪ್ರಯೋಗ ಮಾಡ್ತಾವಳೊ. ಆದರೆ ನಮ್ಮ ಭಾರತ ದೇಶದ ಉದ್ದೇಶ ಬ್ಯಾರೆ ಉಟ್ಟು. ಈಗ ನಮ್ಮ ಒಟ್ಟು ಪ್ರಪಂಚಲಿ ಜನಸಂಖ್ಯೆ ಹೆಚ್ಚುತಿರ್ದು ಗ್ಯಾನ ಮಾಡಿರೆ ಹೆದರಿಕೆ ಆದೆ. ಸುಮಾರ್ ಏಳ್ನೂರು ಕೋಟಿ ಜನಸಂಖ್ಯೆ ದಾಟಿ ಹೋಗುಟ್ಟು. ಆದರೆ ಬೂಮಿಗೆ ಹೆಚ್ಚಿತ ಹೇಳಿರೆ ಸುಮಾರ್ ಒಂದು ಸಾವಿರ ಕೋಟಿ ಮನ್ಸರ; ಅದರೊಟ್ಟಿಗೆ ಪ್ರಾಣಿ, ಪಕ್ಷಿ, ಕೀಟ, ಹಾವು ಹಿಂಗೆ ಎಲ್ಲವುಕೆ ತಿಂಬಕೆ ಅನ್ನ, ನೀರ್, ಆಹಾರ, ಜಾಗ ಸಿಕ್ಕಿ; ಬದ್ಕಿಕೆ ಸಾಧ್ಯ ಇರ್ದುತ ವಿಜ್ಞಾನಿಗ ಲೆಕ್ಕಹಾಕಿವಳೊ. ಅದಕ್ಕಿಂತ ಜಾಸ್ತಿ ಆದರೆ ಏನಾದು...? ತಿಂಬಕೆ ಕುಡಿಯಕೆ ಅನ್ನ–ನೀರ್ ಹೋಗಲಿ, ಸರಿಯಾಗಿ ಕಾಲ್ ನೀಂಡಿ ಕುದ್ದುರಿಕೆ ಜಾಗ ಸಾಕಾದುಲೆ! ಪರಿಸ್ಥಿತಿ ಹಿಂಗೆ ಮುಂದುವರ್ದರೆ ನಾಳೆ ಅಲ್ಲದಿದ್ದರೂ ಇನ್ ಎಂಬತ್ತು–ನೂರು ವರ್ಸಲಿ ನಿಜ ಆಗುವ ಸಂದರ್ಭ ಉಟ್ಟು.

ಆದ ಕಾರಣ ಬೂಮಿನ್ದ ದೂರ, ಚಂದ್ರನ ಮೇಲೆ, ಮಂಗಳ ಗ್ರಹದ ಮೇಲೆ ಎಲ್ಲಿ ಆದರ್ ಮನ್ಸರ್ ಬದ್ಕಿ–ಬಾಳಿಕೆ ಸಾಧ್ಯ ಉಟ್ಟಾತ ವಿಜ್ಞಾನಿಗ ತಲೆ ಕೆಡ್ಸಿಕಂಡ್ ವಳೊ. ನಮ್ಮ ಅಜ್ಜಂದರ್, ಕುಶಾಲನಗರ, ಸೋಮವಾರಪೇಟೆ, ಮಾಲ್ದಾರೆ, ತಿತಿಮತಿ, ಮೈಸೂರು, ಬೆಂಗಳೂರು ಕಡೆ ಹೋಗಿ, ಕೆಲಸ ಹಿಡ್ದ್, ಮನೆ–ಮಾರ್, ಆಸ್ತಿ ಮಾಡ್ದಂಗೆ ಚಂದ್ರನ ಮೇಲೆ ವಾಸ ಮಾಡಿಕೆ ಆದುಲೆ. ಅಲ್ಲಿ ಮುಖ್ಯವಾಗಿ ಉಸುರಾಡಿಕೆ ಗಾಳಿ, ಕುಡಿಯಕೆ ನೀರ್, ಕೃಷಿ ಮಾಡಿಕೆ ಮಣ್ಣ್, ಬೆಳಕ್, ಉಷ್ಣ ಎಲ್ಲ ಸರಿ ಇರೋಕು. ಅಂತದ್ ಒಂದೊಂದು ಅಂಶ ಒಂದೊಂದು ಕಡೆ ಅಲ್ಲಿ ಇರುದು ನಮ್ಮ ವಿಜ್ಞಾನಿಗ ಕಂಡ್ ಹಿಡ್ದರೂ, ಅದರ ಸರಿಯಾದ ತಿಳುವಳಿಕೆಗೆ ಇನ್ನೂ ಸುಮಾರ್ ಸಂಶೋಧನೆ; ಅಲ್ಲಿಗೆ ರಾಕೆಟ್ ಲಿ ಹೋದು–ಬಾದು ಸಾಕಷ್ಟ್ ಬಾಕಿ ಉಟ್ಟು. ಉದಾಹರಣೆಗೆ, ನಾವು ನಡಿಯಕನ ಅಡ್ಡ ಬಂದ ಎರಡ್ ಅಡಿ ಅಗಲದ ತೋಡುನ ಹಾರಿ ದಾಟಿ ಮುಂದೆ

ಹೋದವೇ. ಚಂದ್ರನ ಮೇಲೆ ಗುರುತ್ವ ಬಲ ನಮ್ಮ ಬೂಮಿಗಿಂತ ಆರ್ ಪಾಲ್ ಕಮ್ಮಿ ಉಟ್ಟು. ಹಂಗಾಗಿ ಬೂಮಿ ಮೇಲೆ ಹಾರಿದಂಗೆ ಚಂದ್ರನ ಮೇಲೆ ಎರ್ಡ್ ಅಡಿ ಹಾರಿರೆ, ನಾವು ಹನ್ನೆರ್ಡ್ ಅಡಿ ದೂರಲಿ ಬಿದ್ದಿದ್ದವೇ! ಹಂಗೆ, ಬೂಮಿಲಿ ಸುಮಾರ್ ಹನ್ನೆರ್ಡ್ ಗಂಟೆ ಹಗ್ಲ್. ಹನ್ನೆರ್ಡ್ ಗಂಟೆ ರಾತ್ರಿ ಆಗಿ ಒಂದೇ ದಿನದ ಇಪ್ಪತ್ನಾಲ್ಕ್ ಗಂಟೆಗೆ ಒಂದು ದಿನತ ಲೆಕ್ಕ. ಆದರೆ ಚಂದ್ರನಲ್ಲಿ ಹಿಂಗೆ ಇಲ್ಲೆ. ಅಲ್ಲಿ ಒಂದು ರಾತ್ರಿತ ಹೇಳಿರೆ ನಮ್ಮ ಹದಿನಾಲ್ಕ್ ದಿನ. ಒಂದು ಹಗಲ್ತ ಹೇಳಿರೆ ಹದಿನಾಲ್ಕ್ ದಿನಗ, ಹೆಚ್ಚು ಕಡಿಮೆ ನಮ್ಮ ಇಪ್ಪತ್ತೆಂಟ್ ದಿನಗಳಿಗೆ ಚಂದ್ರನ ಒಂದು ದಿನ ಸಮ! ಅಲ್ಲಿನ ಹಗಲ್‌ನ ದಿನಗಳಲ್ಲಿ ಸೂರ್ಯನ ಬೆಳ್ಕನ ಶಾಖ *125ಡಿಗ್ರಿ ಸೆಂಟಿಗ್ರೇಡ್ ಇದ್ದರೆ, ರಾತ್ರಿ ಸಮಯಲಿ ಮೈನಸ್ ನೂರೈವತ್ತು ಡಿಗ್ರಿ ಚಳಿ ಇದ್ದದೆ. ನಮ್ಮಲ್ಲಿ ನಂಗೆ ಗಾಳಿ ವಾತಾವರಣ ಇಲ್ಲೆ. ಹಿಂಗೆ ಒಂದೊಂದು ಗ್ರಹಗಳ ಪರಿಸ್ಥಿತಿ ಒಂದೊಂದು ತರ ಇದ್ದದೆ. ಮುಂದೆ ಒಂದು ದಿನ, ಚಂದ್ರನ ಮೇಲೆ ಇಲ್ಲದಿದ್ದರೆ ಮಂಗಳನ ಮೇಲೆ ದೊಡ್ಡ ದೊಡ್ಡ ಗಾಜಿದ್, ಪ್ಲಾಸ್ಟಿಕ್‌ದ್ ಕವಚಗಳ ಕಟ್ಟಿ, ಅದರೊಳಗೆ ಬೂಮಿನಂಗೆ ಗಾಳಿ, ಬೆಳ್ಕ್, ಮಣ್ಣ್ ಏರ್ಪಾದ್ ಮಾಡಿ, ಮುಂದೆನ ಮನ್ಸನ ವಂಶದವು ಬದುಕುವ ಕಾಲ ಬಾದು.

ಇದಿಷ್ಟ್ ನಮ್ಮ ಚಂದ್ರನ ಕತೆ. ಆದರೆ, ಇನ್ನ್ ಆಕಾಸಲಿ ಕೊಟ್ಯಾನ್ತರ ಸಂಕೆಲಿ ಮಿನ್ಗ್ ತಿರುವ ನಕ್ಷತ್ರಗಳ ಗ್ಯಾಲಕ್ಸಿಗಳ, ಕೆಂಪು ದೈತ್ಯ ನಕ್ಷತ್ರಗಳ, ನೆಬ್ಯುಲಗಳ, ಶ್ವೇತ ಕುಬ್ಜಗಳ, ಕಪ್ಪು ರಂಧ್ರಗಳ ಒಟ್ಟಿಗೆ ನಮ್ಮದೇ ಸೌರಮಂಡಲ, ಅದರ ಒಂಬತ್ತು (ಈಗ ಎಂಟ್ ಮಾತ್ರ ಲೆಕ್ಕಕೆ ಉಟ್ಟು) ಗ್ರಹಗ, ಮತ್ತೆ ಕ್ಷೀರಪಥ, ಧೂಮಕೇತುಗಳ ಕತೆ ತುಂಬಾ ಉಟ್ಟು. ಎಲ್ಲಾ ಸಂಗತಿಗಳ ಓದಿ ಆಕನ ನಮಿಗೆ. ಈ ಪ್ರಪಂಚ ಎಸ್ಟ್ ದೊಡ್ಡದ್ ಉಟ್ಟು. ನಾವು ದೊಡ್ಡದ್ ತ ಯೋಚನೆ ಮಾಡಿದ ಸೂರ್ಯ ಸಹ ಎಸ್ಟ್ ಸಣ್ಣದ್. ಅದಿಕೆ ಹೋಲಿಕೆ ಮಾಡಿರೆ ನಮ್ಮ ಬೂಮಿ ಕೂಡ ಬಾರೀ ಸಣ್ಣದ್. ಅದರ ಮೇಲೆ ಬದುಕುವ ನಾವು ಮನ್ಸರ್ ದೂಳಿಗೆ ಕೂಡ ಸಮ ಇಲ್ಲೇತ ಗೊತ್ತಾದೆ. ಆದರೆ ನಿರಾಸೆ ಬೇಡ, ಪ್ರಪಂಚ ಇರುದೇ ಹಂಗೆ.

ನಮ್ಮ ಚಂದ್ರು ಹೈದ ಕತ್ತಲೆಲಿ ಕಕ್ಕಟ್ಟ್ ಮೇಲೆ ಕುದ್ದುಕಂಡ್ ಚಾಳೆ ಮರ ತುದಿನ ನೋಡ್ತಿದ್ದದ್ ಇದೆ ಆಕಾಸಲಿ ಮಿನ್ಗ್ ತಿದ್ದ ಈ ಎಲ್ಲಾ ಆಕಾಶ ಕಾಯಗಳ. ನೋಡಿಕೆ ಒಂದು ಸಣ್ಣ ಮೂಗುಬೊಟ್ಟುನಂಗೆ ಪಳ–ಪಳತ ಹೊಳಿತಿರುವ ನಕ್ಷತ್ರಗ ಸೂರ್ಯನಂಗೆ ಅಥವಾ ಅದಕ್ಕಿಂತ ಬಾರಿ ದೊಡ್ಡದ್ ಹೌದು. ಅವು ತುಂಬಾ ದೂರಲಿ ಇರೋದರಿಂದ ನಮಿಗೆ ಸಣ್ಣ ಚುಕ್ಕಿನಂಗೆ ಕಂಡವೆ. ನಾವು ಮನೇಲಿ ಲೈಟ್‌ದ್ ಸ್ವಿಚ್ ಒತ್ತಿದ ಕೂಡಲೇ ಬೆಳ್ಕ್ ಕಂಡಡೆ. ಆದರೆ ಸೂರ್ಯನ ಬೆಳ್ಕ್. ನಕ್ಷತ್ರಗಳ ಬೆಳ್ಕ್ ಅಲ್ಲಿಂದ ಹೊರ್ಟ್ ನಮಿಗೆ ಕಾಂಬಕೆ ಸ್ವಲ್ಪ ಹೊತ್ತು ಬೇಕಾದೆ. ಇದರಿಂದ ನಮಿಗೆ ಮತ್ತೆ ನಕ್ಷತ್ರಗಳಿಗೆ ಇರುವ ದೂರನ ಕಂಡ್

ಹಿಡಿಯಕೆ ಸಾಧ್ಯ ಉಟ್ಟು. ನಮ್ಮ ಸೂರ್ಯಂದ ಹೊರಡುವ ಬೆಳ್ಕ್ ನಮಿಗೆ ಅಂದರೆ ನಮ್ಮ ಬೂಮಿ ಮೇಲೆ ಬೀಳಿಕೆ ಸುಮಾರ್ ಎಂಟ್ ನಿಮ್ಸ ಬೇಕು; ಬೆಳ್ಕ್‌ನ ವೇಗ ಸೆಕೆಂಡ್‌ಗೆ ಮೂರು ಲಕ್ಷ ಕಿಲೋಮೀಟರ್.... ಇದೆಲ್ಲ ನಾವು ಶಾಲೆಲಿ ಕಲ್ತೊಳೋ. ಅಂದರೆ ನಾವು ಈ ಕ್ಷಣಲಿ ನೋಡ್ತಾ ಇರುವ ಸೂರ್ಯನ ಬೆಳ್ಕ್, ಎಂಟ್ ನಿಮಿಷದ ಹಿಂದೆ ಅಲ್ಲಿಂದ ಹೊರ್ಟ್, ಸುಮಾರ್ ಹದಿನಾಲ್ಕ್ ವರೆ–ಹದಿನೈದು ಕೋಟಿ ಕಿಲೋಮೀಟರ್ ಪ್ರಯಾಣ ಮಾಡಿ ಬಂದುಟ್ಟುತ ಅರ್ಥ ಆದೆ. ಇದನ್ನ ಒಂದು 'ಅಸ್ಟ್ರಾನಾಮಿಕಲ್ ಯೂನಿಟ್'ತ ಸಹ ಕರ್ದವೆ. ಇಲ್ಲಿಂದ ಮುಂದೆ ಜನಸಾಮಾನ್ಯರ ದೂರದ ಲೆಕ್ಕಾಚಾರ, ಕಿಲೋಮೀಟರ್ –ಮೈಲ್ ಎಲ್ಲಾ ಪ್ರಯೋಜನ ಬಾದುಲೆ. ನಾವು ತಿಳ್ದನ್ಗೆ ಸೂರ್ಯ ಒಂದು ಸಾಮಾನ್ಯ ನಕ್ಷತ್ರ ಮಾತ್ರ. ಅದರ ಬುಟ್ಟರೆ ಮುಂದೆನ ಹತ್ರದ ನಕ್ಷತ್ರ 'ಆಲ್ಫಾ ಸೆಂಟರಿ' ನಕ್ಷತ್ರಗಳ ಗುಂಪು. ಆದರೆ ಅದರ ದೂರನ ಕಿಲೋಮೀಟರ್ ಲಿ ಬರಿಯಕುತ ಆದರೆ ಒಂದು ಪುಟ ಬೇಕಾದು. ಹಂಗಾಗಿ, ಬೆಳಕ್ ಸೆಕೆಂಡಿಗೆ ಮೂರು ಲಕ್ಷ ಕಿಲೋಮೀಟರ್ ದೂರ ಹೋದರೆ, ಗಂಟೆಗೆ ಎಷ್ಟಾತ್, ದಿನಕೆ ಎಷ್ಟಾತ್ ಹಂಗೆ ವರ್ಷಕೆ ಎಸ್ಟ್ ದೂರ ಹೋದೆತ' ಲೆಕ್ಕ ಹಾಕಿ ಅದನ್ನ 'ಒಂದು ಜ್ಯೋತಿ ವರ್ಷ ದೂರ'ತ ಕರ್ದವೆ.

ಈಗ ನಾವು ವೇಗ ಅಥವಾ ಸ್ಪೀಡ್ ಬಗ್ಗೆ ಸ್ವಲ್ಪ ವಿವರಣೆ ಮಾಡಿಕಾದೆ. ಉದಾಹರಣೆಗೆ, ಒಳ್ಳೆ ಬೈಕ್, ಕಾರ್‌ಗ ಗಂಟೆಗೆ ನೂರಾ ಐವತ್ತರಿಂದ ಇನ್ನೂರ್ ಕಿಲೋಮೀಟರ್ ಸ್ಪೀಡ್ ಲಿ ಹೋದವೆ. ಪ್ರಯಾಣಿಕ ವಿಮಾನ ಗಂಟೆಗೆ ಸಾವಿರ ಕಿ.ಮೀ. ದೂರ ಹೋದರೆ, ಯುದ್ಧ ವಿಮಾನಗ ಎರಡ್ ಸಾವಿರನ್ದ ಮೂರು ಸಾವಿರ ಕಿ.ಮೀ. ಸ್ಪೀಡ್ ಹೋದು (ಯುದ್ಧ ವಿಮಾನಗಳ ವೇಗನ 'ಮ್ಯಾಕ್ ಸ್ಪೀಡ್' ಲೆಕ್ಕಲಿ ಅಂದರೆ ಶಬ್ದಕ್ಕಿಂತ ಎಸ್ಟ್ ಜಾಸ್ತಿ ಸ್ಪೀಡ್ ತ ಹೇಳಿವೆ) ಯಾವುದೇ ಆಕಾಶ ನೌಕೆಗೆ, ರಾಕೆಟ್‌ಗ ಬೂಮಿನ ಗುರುತ್ವಾಕರ್ಷಣೆ ತಪ್ಪಿಸಿಕಂಡ್ ಬಾಹ್ಯಾಕಾಶಕ್ಕೆ ದಾಟಿ ಹೋಕುತಾದರೆ, ಕನಿಷ್ಠ ಗಂಟೆಗೆ ಅದರ ವೇಗ ನಲ್ವತ್ತು ಸಾವಿರ ಕಿಲೋಮೀಟರ್ ಅಥವಾ 11.2 ಕಿ.ಮೀ/ ಸೆಕೆಂಡ್ ಇರೊಕು. ಹಂಗಾಗಿ ನಮ್ಮ ಸಾಧಾರಣ ವಿಮಾನಗಳಲ್ಲಿ ಇರುವ ಇಂಜಿನ್ ನಂಬಿಕಂಡ್ ಬಾಹ್ಯಾಕಾಶಕ್ಕಾಗಲಿ, ಚಂದ್ರನಲ್ಲಿಗಾಗಲಿ ಹೋಕೆ ಸಾಧ್ಯ ಇಲ್ಲೆ. ವಿಮಾನದ ಇಂಜಿನ್ಗೆ ಶಕ್ತಿ, ವೇಗ ಬರೋಕೂತ ಆದರೆ ಅದಿಕ್ಕೆ ಪೆಟ್ರೋಲ್ ಬೇಕು. ಪೆಟ್ರೋಲ್ ಉರಿಯಕೆ ಆಮ್ಲಜನಕ ಬೇಕೆ ಬೇಕು. ಅದ್ ವಾತಾವರಣದ ಗಾಳಿಲಿ ಇದ್ದದೆತ ನಮಿಗೆ ಗೊತ್ತುಟ್ಟು. ನಮ್ಮ ಗಾಳಿ ವಾತಾವರಣ ಬೂಮಿಂದ ಮೇಲೆ ಹೋದಂಗೆ ತೆಳು ಆಗ್ತಾ ಹೋಗಿ, ಸುಮಾರ್ ನೂರ್ ಕಿ.ಮೀ. ಮೇಲೆಂದ ಗಾಳಿನೂ ಕಮ್ಮಿ ಆಗಿ, ಆಮ್ಲಜನಕನೂ ಇಲ್ಲದೆ ಏರೋಪ್ಲೇನ್ ಹಾರಿಕೆ ಆದುಲೆ!

ಈ ಕಾರಣಂದ, ರಾಕೆಟ್‌ಗ ಆಕಾಶನೌಕೆಗ; ಬಹಳ ತಂಪು ಮಾಡಿದ ಇಂದನ – ಆಮ್ಲಜನಕನ ಮಿಶ್ರ ಮಾಡುವ 'ಕ್ರಯೋಜನಿಕ್ ಎಂಜಿನ್'ತ ಹೇಳುವ ವಿಶೇಷ ಎಂಜಿನ್ ರಾಕೆಟ್ ಕಂಡ್ ಹಿಡ್ದೋಳೊ. ಅದೂ ಕೂಡ ಬರೀ ನಾಲ್ಕ್ ಐದ್ ದೇಶಗಳಿಗೆ ಮಾತ್ರ ಗೊತ್ತಿತ್ತ್. ನಮ್ಮ ದೇಶ ಭಾರತ ಇತ್ತೀಚೆಗೆ ಈ ವಿಶೇಷ ತಂತ್ರಜ್ಞಾನದ ಕ್ರಯೋಜನಿಕ್ ಇಂಜಿನ್ ಕಂಡ್ ಹಿಡ್ದದರ ಹಿಂದೆ ಒಂದು ದೊಡ್ಡ ಕತೆ ಉಟ್ಟು. ಅದನ್ನ ಈಗ ವಿವರಿಸಿಕೆ ಹೋದುಲೆ. ನಾವು ಸ್ವಂತ ಚಂದ್ರಾಯಣ, ಮಂಗಳಾಯಣ ಆಕಾಶನೌಕೆಗಳ ಈ ಹೊಸ ತಂತ್ರಜ್ಞಾನಂದ ಕಳ್ಸ್ ತಾ ಇರೋದರ ಹಿಂದೆ ನಮ್ಮ ದೇಶಭಕ್ತ ಆಕಾಶ ವಿಜ್ಞಾನಿಗಳ ದೊಡ್ಡ ಪರಿಶ್ರಮ, ತ್ಯಾಗ ಉಟ್ಟುತ ನೆನಪು ಮಾಡಿಕಂಡರೆ ಸಾಕ್.

ಈಗ ಪುನಃ ಚಂದ್ರನಲ್ಲಿಗೆ, ಚಂದ್ರಾಯಣದ 3ನೇ ಯೋಜನೆನಂಗೆ ಹೋಗುವ ಬಗೆ ಯೋಚಿಸೊನ. ಬೂಮಿಂದ ಚಂದ್ರನಲ್ಲಿಗೆ ಇರುವ ದೂರ ಮೂರು ಲಕ್ಷದ ಎಂಬತ್ನಾಲ್ಕ್ ಸಾವಿರ ಕಿ.ಮೀ. ಬೆಳ್ಕ್‌ನ ವೇಗಲಿ ಹೋದರೆ ಎರ್ಡ್ ಸೆಕೆಂಡ್ ಸ ಬ್ಯಾಡ. ಆದರೆ ಅದ್ ಆಗದ ಹೋಗದ ಮಾತ್. ಅದೇ ಕ್ರಯೋಜನಿಕ್ ರಾಕೆಟ್ ಎಂಜಿನ್ ಇರುವ ನಮ್ಮ ಆಕಾಶನೌಕೆಗೆ ಗಂಟೆಗೆ ನಲ್ವತ್ತು ಸಾವಿರ ಕಿ.ಮೀ. ಹೋದರೂ, ಬೂಮಿಗೆ ಒಂದೆರಡ್ ಸುತ್ತು ಬಂದ ಮೇಲೆ ವೇಗನ ಹೆಚ್ಚು ಕಮ್ಮಿ ಮಾಡಿಕಂಡ್ ಅದಿಕೆ ಸರಿಯಾಗೇ ಎಂಜಿನ್ ಬೂಸ್ಟರ್ ಅಥವಾ ನಮ್ಮ ಮಾತ್ ಲಿ ಹೇಳಿರೆ 'ಎಕ್ಸಿಲೇಟರ್ ಕೊಟ್ಟ್ ಕಂಡ್' ಅಲ್ಲಿಂದ ಮೆಲ್ಲಂಗೆ ನಮ್ಮ ಬೂಮಿದ್ ಗುರುತ್ವ ವಲಯ ತಪ್ಪುಸಿಕಂಡ್, ಮುಂದೆ ಚಂದ್ರನ ಗುರುತ್ವ ವಲಯಕೆ ದಾಟಿ, ಅಲ್ಲಿ ಚಂದ್ರಂಗೆ ಎರ್ಡ್ ಮೂರು ಸುತ್ತು ಬಂದ್, ಅದರ ಆಕಾಸಲಿ ನಿದಾನಕೆ ನೌಕೆನ ಇಳ್ಸುವ ಒಂದು ಸಂಕೀಣ್ ಕೆಲ್ಸನ ಬಹಳ ಸೂಕ್ಷ್ಮ ಜಾಣತನಲಿ ನಿಬಾಯಿಸಕು. ಇಲ್ಲದಿದ್ದರೆ ನಮ್ಮ ಹಿಂದೆನ ಚಂದ್ರಾಯಣ 2 ಬಿದ್ದ್ ಹೋದಂಗೆ; ಅಲ್ಲದಿದ್ದರೆ, ಅಮೇರಿಕದ ಸ್ಪೇಸ್ ಶಟಲ್ ವಾಪಾಸ್ ಬಾಕನ ಸ್ಫೋಟ ಆಗಿ ನಮ್ಮ ಗಗನಯಾನಿ ಕಲ್ಪನಾ ಚಾವ್ಲಾ ಒಟ್ಟಿಗೆ ಬೇರೆಯವು ಚೂರು ಚೂರು ಆದಂಗೆ ಆಕಾಗದ್. ನಮ್ಮ ಮುಂದೆನ 'ಚಂದ್ರಾಯಣ 3 ಗಗನನೌಕೆಲಿ' ಗಗನಯಾತ್ರಿಗ ಇರೋದ್ರಿಂದ. ಹಿಂದೆ ನಂಗೆ ನಲ್ವತ್ತೈದ್ ದಿನದ ದೂರದ ದಾರಿ ಕ್ರಮ ಇಲ್ಲೆ. ಈಗ ಚಂದ್ರನಲ್ಲಿಗೆ ಹೋಗಿ ಅಲ್ಲಿ ಏನ್ ಪರೀಕ್ಷೆ ಮಾಡಿಕೆ ಉಟ್ಟು ಅದರ ಮಾಡಿ, ವಾಪಾಸ್ ಬರಿ ಏಳ್ ದಿನಗಳಲ್ಲಿ ಬಂದವೆ. ಈ ಕಾರ್ಯ ಎರಡ್ಸಾವಿರದ ಇಪ್ಪತ್ತೆರಡನೆ ಇಸವಿಲಿ ಮಾಡುದೂತ ತೀರ್ಮಾನ ಆಗುಟ್ಟು.

---

**ವಿಶ್ವನಾಥ ಎಡಿಕೇರಿ**

# ಬನ್ನಿ ಓದೋಮ

**ಕನ್ನಡದ ಮಹತ್ವದ ಕಥೆಗಾರ ಯು.ಆರ್. ಅನಂತಮೂರ್ತಿಯವು. ಕನ್ನಡಕ್ಕೆ ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿ ತಂದುಕೊಟ್ಟ ಹೆಗ್ಗಳಿಕೆ ಇವರ್ದ್. ಒಂದು ಕಾಲಘಟ್ಟದ ಸಾಮಾಜಿಕ ಪರಿಸ್ಥಿತಿ, ಅದರ್‌ಂದಾಗಿ ಜನಜೀವನದ ಮೇಲೆ ಆಗುವ ಪರಿಣಾಮ, ಇಂಥವುಗಳ್ನ ತಮ್ಮ ಕಥೆ ಕಾದಂಬರಿಗಳ ಮೂಲಕ ಸಮರ್ಥವಾಗಿ ಕಟ್ಟಿಕೊಟ್ಟವು ಇವು. ಆಯಾಯ ಸಂದರ್ಭದ ವಿಷಮ ಪರಿಸ್ಥಿತಿ, ಬದುಕಿನ ತಲ್ಲಣಗಳ್ನ ಜಾಸ್ತಿ ಮಾತಾಡದೆ ಕಡಿಮೆ ಪದಲಿ, ಹೆಚ್ಚು ಅರ್ಥ ಕೊಡುವಂಗೆ ಹೇಳುವ ಶಕ್ತಿ ಇವರ ಬರಹಗಳಿಗೆ ಉಟ್ಟು. ಅವರ 'ಮೌನಿ'ತೇಳುವ ಸಣ್ಣಕಥೆ ಇದಕ್ಕೆ ಒಂದು ಉದಾಹರಣೆ. ಈ ಕಥೆಲಿ ಮೊನ್ಸನ ಮನೋವ್ಯಾಪಾರಗಳ್ನ ಬಹಳ ಲಾಯ್ಕಲಿ ಮಂಡಿಸುವೆ. ಓದಿಯಾದ ಮೇಲೆ ಬೊದುಕುನ ನೋಡುವ ರೀತಿನೇ ಬೇರೆ ಆದೆ .ಈ ಕಥೆ ಸಿನಿಮಾ ಕೂಡ ಆವುಟು. ಬಿಎಸ್ ಲಿಂಗದೇವರು ನಿರ್ದೇಶನ ಮಾಡಿಯೊಳೊ. ಈ ಕತೆನ ಬಗ್ಗೆ ಹೆಚ್ಚ್ ಹೇಳಿರೆ ರಸ ಇಲ್ಲೆ. ನೀವು ಓದಿರೇ ಒಳ್ಳೆದ್. ನಮ್ಮ ಅರೆಭಾಷೆ ಪರಿಸರದ ಕಥೆಗ ಈ ರೀತಿ ದ್ ಬಂದರೆ ಒಳ್ಳೆದ್.**

## ಮೌನಿ

ಭಾವಿಕೆರೆ ಕುಪ್ಪಣ್ಣ ಭಟ್ಟರಿಗೂ ಸೀಬಿನಕೆರೆ ಅಪ್ಪಣ್ಣ ಭಟ್ಟರಿಗೂ ಹಾವು ಮುಂಗುಸಿ. ಈ ವೈರ ಆಜನ್ಮ; ಇದರ ಮೂಲ ಅಗಮ್ಯ. ಅರ್ಧ ಮೈಲಿ ದೂರದಲ್ಲಿರುವ ಎರಡು ಗುಡ್ಡಗಳ ಬೆನ್ನಿಗೆ ಇವರ ಮನೆ. ನಡುವೆ ಒಂದು ಕಣಿವೆಯಲ್ಲಿ ಬೇಲಿಯ ಆಚೆ ಕುಪ್ಪಣ್ಣ ಭಟ್ಟರ ತೋಟವಾದರೆ ಈಚೆ ಅಪ್ಪಣ್ಣ ಭಟ್ಟರ ತೋಟ. ಇಬ್ಬರೂ ಶ್ರೀ ಮಠದ ನರಸಿಂಹದೇವರ ಒಕ್ಕಲು. ಇಬ್ಬರೂ ಕೈಯಲ್ಲಿ ಬರಿಯ ತೀರ್ಥದ ಬಟ್ಟಲು ಹಿಡಿದು ಘಟ್ಟದ ಕೆಳಗಿನಿಂದ ದುಗ್ಗಾಣಿಯಿಲ್ಲದೆ ಅಡಿಕೆ ತೋಟ ಮಾಡಲು ಬಂದವರು. ಆರು ಮೈಲಾಚೆಯಿರುವ ಗೋಪಾಲ ಕಮ್ತಿಯ ಅಂಗಡಿಯಲ್ಲಿ ಇಬ್ಬರದೂ ಲೆಕ್ಕವುಂಟು.

ಕುಪ್ಪಣ್ಣ ಭಟ್ಟರು ವಯಸ್ಸಿನಲ್ಲಿ ಹಿರಿಯರು. ಅವರು ಕಳೆದ ಐವತ್ತು ಸಂವತ್ಸರ ಒಣಗಿದ ಹುಳಿ ಮಾವಿನ ಹಣ್ಣಿನಂತಹ ಅವರ ಮುಖದಲ್ಲಿ ಎದ್ದು ಕಾಣುತ್ತದೆ. ಒಂದು ಕಾಲದಲ್ಲಿ–ಅಂದರೆ ಹೆಚ್ಚೇನಲ್ಲ. ಬರಿಯ ಎರಡು ವರ್ಷದ–ಕೆಳಗೆ ಪೆಟ್ಟೊಂದಕ್ಕೆ ತುಂಡೆರಡು ಎನ್ನುವಂತಹ ಮಾತನ್ನಾಡಲು ಮಾತ್ರ ಬಾಯಿ ತೆರೆಯುತ್ತಿದ್ದ ಮನುಷ್ಯ. ಕಪ್ಪಗೆ ಕುಳ್ಳಗೆ ಕೃಶವಾದ ಅವರ

ಶರೀರ ಈಚೆಗೆ ಮಾತ್ರ ದಿನಗಳೆದಂತೆ ಸೊರಗುತ್ತಿದೆ. ಉಳಿದ ಮರ್ಜಿಯಲ್ಲೇನೂ ಬದಲಿಲ್ಲ. ಅದೇ ಹೊಳೆಯುವ ಬೋಳು ತಲೆ. ಒಂದು ಕಾಲದಲ್ಲಿ ಸದಾ ಸಿಡುಕಿನ, ಈಗ ಮಂಕಾಗಿ ಉರಿಯುವ ಸಣ್ಣ ಕಣ್ಣುಗಳು. ಗುಜ್ಜ ಮೂಗು. ದಿಂಡು ಮಾವಿನ ಮೂತಿಯ ಗದ್ದ. ಉಟ್ಟ ಪಂಚೆ ಹೊದ್ದ ಧೋತ್ರಗಳ ಮೇಲೆ ಅವರ ಸಾಲದಂತೆಯೇ ವರ್ಷಾಂತರದಿಂದ ಉಳಿದು ಬಂದ ಬಾಳೆ ಕರೆ. ಅಡಿಕೆ ಕರೆ ಬಾಯಿಯ ಒಂದು ಪಾರ್ಶ್ವದಲ್ಲಿ ಸದಾ ಒಂದು ಹೊಗೆಸೊಪ್ಪಿನ ಉಂಡೆಯಿದ್ದೇ ಇರಬೇಕು. ಒಂದು ಕಾಲದಲ್ಲಿ ಏನಾದರೂ ಸಿಟ್ಟಿನ ಮಾತನ್ನಾಡುವ ಪ್ರಮೇಯ ಒದಗಿದಲ್ಲಿ ಎದುರು ಪಕ್ಷದವನ ಮಾತನ್ನೆಲ್ಲ ಬಿಗಿದ ತುಟಿಯಲ್ಲಿ ಆಲಿಸಿ, ಅಂಗಳದೊಂದು ಮೂಲೆಗೆ ಧಿಡಧಿಡನೆ ನಡೆದು, ಹೊಗೆಸೊಪ್ಪನ್ನು ಉಗಿದು, ಎದುರಾಳಿ ಎದುರುತ್ತರ ಕೊಡಬಾರದು – ಹಾಗೆ ಘಟೀರೆನ್ನುವ ಒಂದು ಮಾತನ್ನಾಡಿ, ಮತ್ತೆ ಹೊಗೆಸೊಪ್ಪಿನ ಚೂರೊಂದನ್ನು ಸುಣ್ಣದಲ್ಲಿ ತಿಕ್ಕಿ, ಬಾಯಲ್ಲಿಟ್ಟು ಮೌನವಾಗಿಬಿಡುತ್ತಿದ್ದ ಮನುಷ್ಯ ಅವರು. ಈಗ ಮಾತ್ರ ಕಾಲು ಕೆರೆದು–ಕೊಂಡು ಜನ ಜಗಳಕ್ಕೆ ಬಂದರೂ ನನಗೂ ನಿನಗೂ ವೈವಾಟಿಲ್ಲವೆಂಬತೆ ತಿರಸ್ಕಾರದಿಂದ ಬೀಗ ಮುದ್ರೆಯ ಮುಖವನ್ನೆತ್ತಿ ನಿಶ್ಚಲರಾಗಿ ಬಿಡುತ್ತಾರೆ.

ಸೀಬಿನಕೆರೆ ಅಪ್ಪಣ್ಣ ಭಟ್ಟರು ಲೋಕಪ್ರಿಯರು. ಬೆಣ್ಣೆಯಲ್ಲಿ ಕೂದಲು ತೆಗೆದಂತೆ ನಯವಾದ ನಾಜೋಕಾದ ರಾಗದ ಮಾತು ಅವರದು. ಎರಡು ಮೈಲಾಚೆ ಇರುವ ಬುಕ್ಲಾಪುರದ ಅಗ್ರಹಾರದ ಬ್ರಾಹ್ಮಣರೆಲ್ಲ– ಬಡವ ಬಲ್ಲಿದನೆನ್ನದೆ–ಅವರಿಗೆ ಬೇಕಾದವರು. ಮೊದಲೇ ಕುಪ್ಪಣ್ಣ ಭಟ್ಟರು ಜಗಳಗಂಟಿಯಾದ್ದರಿಂದ ಒಂದಲ್ಲ ಒಂದು ಕಾರಣದಿಂದ ಬುಕ್ಲಾಪುರದವರನ್ನೆಲ್ಲ ಮೈಮೇಲೆ ಹಾಕಿಕೊಂಡಿದ್ದರು. ಆದ್ದರಿಂದ ಎಲ್ಲರಿಗೂ ಅಪ್ಪಣ್ಣ ಭಟ್ಟರೆಂದರೆ ಆಗಬೇಕು. ಅಲ್ಲದೆ ಅಪ್ಪಣ್ಣ ಭಟ್ಟರು ಕುಪ್ಪಣ್ಣ ಭಟ್ಟರಂತೆಯೇ ದುಗ್ಗಾಣಿಯಿಲ್ಲದೆ ಬಂದವರಾದರೂ ತೋಟ, ಮನೆ, ಗದ್ದೆಯನ್ನು ಲಾಯಕ್ಕಾಗಿ ಇಟ್ಟುಕೊಂಡಿದ್ದರು. ಅಪ್ಪಣ್ಣ ಭಟ್ಟರ ಸೂರಿನ ಕೆಳಗೆ ಸೇವಂತಿಗೆ, ಅಂಗಳದಲ್ಲಿ ಚಪ್ಪರ, ಬಂದವರಿಗೆ ಬಣ್ಣದ ಚಾಪೆ ಹಾಸಿ ಕಾಫಿ ಕೊಟ್ಟು ಉಪಚರಿಸದೆ ಕಳುಹಿಸುವುದಿಲ್ಲ. ಆದರೆ, ಶೂದ್ರರ ಅಂಗಳ ಬೇಕು–ಕುಪ್ಪಣ್ಣ ಭಟ್ಟರ ಅಂಗಳ ಮಾತ್ರ ಬೇಡ. ಅಲ್ಲೆ ಸೆಗಣಿ, ಅಲ್ಲೆ ಮಕ್ಕಳ ಪಾಯಖಾನೆ, ಮೊಣಕಾಲೆತ್ತರ ಹುಲ್ಲು, ಇಲ್ಲವೆ ಕೆಸರು, ಕಾಲು ಬೆರಳಿನ ಸಂದಿ ಕಡಿಯುವ ಜಿಗಣೆ, ಗೊಬ್ಬರ ಗುಂಡಿಯ ನೊಣ. ಅಪ್ಪಣ್ಣ ಭಟ್ಟರು ಅನ್ನುತ್ತಾರೆ, 'ನಮ್ಮ ಕೊರಗನ ಗುಡಿಸಲು ಅವರದಕ್ಕಿಂತ ವಾಸಿ, ಹೋಗಿ ನೋಡಿ ಬೇಕಾದರೆ.'

# ತವುರು ಮತ್ತೆ ತವುರ್‌ನ ಗೂಡೆಗ

ಹೆಣ್ಮಕ್ಕಳಿಗೆ ತವರುತ
ಕೇಳ್ಕಾನ ಏನೋ ಒಂದು ತರ
ಪ್ರೀತಿ, ಗೌರವದ ಭಾವನೆ
ಹೆಣ್ಮಕ್ಕ ಯಾಗೋಳು ತವರು ಮನೆಯವು
ಸುಖ, ಸಂತೋಷ, ನೆಮ್ಮದಿಯಿಂದಿರಕುತ ಆಸೆ ಪಟ್ಟವೆ
ರಜೆಲಿ ತವರಿಗೆ ಹೋದುತೆಳ್‌ರೆ ಏನೋ ಸಂಭ್ರಮ
ತವರಿಗೆ ಹೋದ ಮೇಲೆ ಏನೋ ಒಂದು ನೆಮ್ಮದಿ ಭಾವನೆ
ಆದರೆ ಈಗ ಹೆಣ್ಮಕ್ಕಳಿಗೆ ಆಸ್ತಿಲ್ಲಿ ಪಾಲ್‌ತ ಕಾನೂನು ಬಂದ ಮೇಲೆ
ಕೆಲವು ಕಡೆಲಿ ಅಣ್ಣ ತಮ್ಮರ ಮೇಲೆ ಪ್ರೀತಿ ಭಾವನೆ ಮಾಯಾಗಿ
ಆಸ್ತಿಲಿ ವ್ಯಾಮೋಹ ಜಾಸ್ತಿಯಾಗುಟ್ಟು
ಸಣ್ಣ ಸಣ್ಣ ವಿಷಯಕ್ಕೆ ನಮಗೂ ಆಸ್ತಿಲಿ ಪಾಲುಟ್ಟು ತೇಳ್ವ ಬಾವನೆ
ಇದರ್‌ಂದ ಅಣ್ಣ, ತಮ್ಮ, ಅಕ್ಕ, ತಂಗೆಯರ ಪ್ರೀತಿ ಮಾಯವಾಗುತ್ತುಟ್ಟು
ಕೊಡ್‌ಗ್‌ಲಿ ಒಂದು ಮನೆತನ ನಿಂತದೆ ಮನೆ ಹೆಸರ್‌ಲಿ
ಈ ಹೆಣ್ಮಕ್ಕಳಿಗೆ ಪಾಲ್ ಕೊಟ್ಟರೆ ಆ ಮನೆತನನೇ ಹರಿದು ಹಂಚಿ
ಹೋದೆ ತೇಳ್‌ದು ನನ್ನ ಬಾವನೆ.
ಅದಕ್ಕಾಗಿಯೆ ಹೆಣ್ಮಕ್ಕಳಿಗೆ ಮದುವೆ ಮಾಡಿಕಾನ ಸೂಜಿಂದ ಹಿಡಿದು
ಅವರವರ ಅನುಕೂಲಕ್ಕೆ ತಕ್ಕಂತೆ ಕಟಲ್‌ಗಂಟ ಬಳುವಳಿಯಾಗಿ
ಕೊಟ್ಟ್ ಸುಖವಾಗಿ ಬಾಳಲಿತ ತವ್‌ರಿನವು ಹರ್‌ಸಿವೆ.
ಆದರೆ ಈಗ ಏನಾಗ್‌ತುಟ್ಟು
ಗೌಡ ಜನಾಂಗದ ಅಕ್ಕ, ತಂಗಿಯರೇ ತವರು ಸುಖವಾಗಿರಲಿತ
ಹರ್‌ಸಿ, ಅದೇ ನಿಮ್ಮನ್ನ ನೂರುಕಾಲ ಸುಖವಾಗಿರುವಂಗೆ ಮಾಡ್ದೆ
ಅಣ್ಣ, ತಮ್ಮರ ಪ್ರೀತಿನೇ ನಿಮಗೆ ಹಾರೈಕೆ, ಆಶೀರ್ವಾದ
ಪ್ರೀತಿಂದ ಕೊಟ್ಟದ್ದ್ ಮನಪೂರ್ವಕವಾಗಿ ತಕಣಿ
ಅದ್ ಒಂದಕ್ಕೆ ಹತ್ತಾಗಿ ಬೆಳ್‌ಕಂಡ್ ಹೋದೆ
ಹಂಗೆ ತವರ್‌ನವು ಮತ್ತೆ ಕೊಟ್ಟ ಗೂಡೆಗ ಸಹ ಸುಖ, ಶಾಂತಿ
ನೆಮ್ಮದಿಲಿ ಬಾಳ್ವೆನ ಮಾಡಕ್‌ತ ನಾನು ಬಾವಿಸಿನೆ.
ಧನ್ಯವಾದಗ

**ಬಡುವಂಡ್ರ ವಿದ್ಯಾ ಲಕ್ಷ್ಮೀಪತಿ**

# ಗದ್ದೆನ ಒಮ್ಮೆ ಸುತ್ತೊನಾ...

ಅರೆಗಾಲ ಹೋಗಿ ಮಳೆಗಾಲ ಬಂದುಟ್ಟು
ಭೂಮಿ ಈಗ ತಣ್ಣಗಾಗ್ತ ಉಟ್ಟು
ಮಾಯಿ ತಿಂಗಳ್ಲಿ ಹಂಞ - ಹಂಞ ಬಂದ ಮಳೆ
ಕಾರ್ತಿಂಗಳ್‌ಲಿ ತೋರ್ಸಿತ್ ಗದ್ದೆಗೊಂದು ಕಳೆ ॥ 1 ॥

ಭೂಮಿಲಿ ಚೋಳು ಆಗುಟ್ಟು
ಹಳ್ಳ-ಚೋಡಿ ತುಂಬಿ ಹರಿತ್ತುಟ್ಟು
ದೇವ್ರ ಲೋಕ ಭೂಮಿಗೆ ಬಂದಂಗೆ ಆಗುಟ್ಟು
ನನ್ನ ಮನ್‌ಸ್ ಗದ್ದೆನ ಕಡೆ ಎಳೆತ್ತುಟ್ಟು ॥ 2 ॥

ಎತ್ತ್‌ಗಳ ಗದ್ದೆಗೆ ಹೂಡಿಕೆ ಬುಟ್ಟೊಳೊ
ಬಿತ್ತಿನ ಗದ್ದೆಗೆ ತುಂಬಾ ಹಾಕೊಳೊ ॥
ಗದ್ದೆ ಪೂರ ನೇಜಿ ಕಾಣ್ತುಟ್ಟು
ಗದ್ದೆ ಪುಣಿಲಿ ನಿತ್ತ್ ನೋಡಿರೆ ಹಸ್‌ರ್ ಆಗುಟ್ಟು ॥ 3 ॥

ಮಳೆ ಹನಿ-ಹನಿಯಾಗಿ ಬಿದ್ದದೆ
ಆಣಿಕಲ್ಲ್ ಮಾಡ್ ಮೇಲೆ ಸದ್ದ್ ಮಾಡ್ದೆ ॥



ಮೀನ್ ಎಸಂಡ್ ಮನೆ ಮುಂದೆ ಬಂದೊಳ
ಮಕ್ಕ–ಮರಿಗ ಬೊಳ್ಪುಗೆ ಅಳುಂಬು
ಹುಡುಕಿಕೆ ಹೋಗೊಳ ॥ 4 ॥

ಗದ್ದೆಲಿ ನೇಜಿ ಪದ್ಯ ಕೇಳ್ತುಟ್ಟು
ನೇಜಿ ಪದ್ಯ ಕೇಳಿಕೆ ಎಸ್ಟ್ ಲಾಯ್ಕಟ್ಟು
ಕೇಳಿಕಂಡ್ ಇದ್ದರೆ ಕೆಲ್ಸಗ ಆದೇ
ಗೊತ್ತಾಗದೆ ಹೋಗುಟ್ಟು ॥ 5 ॥

ಗಾಳಿ ಜೋರ್ಲಿ ಬೀಸಿದೆ
ಮಳೆರಾಜ ಗುಡುಗು – ಮಿಂಚುನ
ಭೂಮಿಗೆ ಕಳ್ಸಿಟ್ಟು
ಚಳಿಗಾಳಿ ಮೈಗೆ ತಾಂಗಿ ತಣ್ಣಗೆ ಮಾಡ್ತುಟ್ಟು ॥ 6 ॥

ಹಕ್ಕಿ ಗದ್ದೆಗೆ ಹಾರಿ ಬಂದೊಳೊ
ಕೈಯ್‌ಲಿ ಸಣ್ಣ – ಸಣ್ಣ ಗೂಡು ಕಟ್ಟೆಳೊ
ಕೈಯ್‌ಲಿ ಭತ್ತದ ತೆನೆ ಕಂಡದೆ
ಮಳೆಗಾಲ ಈಗ ಹಂಞ ನಿತ್ತತ್ ಕಂಡದೆ ॥ 7 ॥

ರೈತನ ಆಸೆಗೆ ಫಲ ಸಿಕ್ಕಿಟ್ಟು
ಎಲ್ಲರ ಹೊಟ್ಟೆ ತುಂಬಿಸಿಟ್ಟು
ಅವನ ಬೆವರ ಹನಿಲಿ ನಮ್ಮ ಬದ್‌ಕ್ ನಿತ್ತುಟ್ಟು
ಆ ದೇವ್ರು ಅವನ ಬುಡದೆ ಕಾಪಾಡಿಟ್ಟು ॥ 8 ॥

**ಕುಸುಮಾಕರ ಅಂಬೆಕಲ್ಲು**
ಚೆಂಬು ಗ್ರಾಮ, ಬಾಲಂಬಿ ಪೋಸ್ಟ್
ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ – 574 234
6364660272

# ಉಗ್ಗವನ ಎಲಡ್ಕೆ ಚೀಲ

ಈ ನೆಂಪುಗಳೇ... ಹಿಂಗೆ
ಉಗ್ಗವನ ಎಲಡ್ಕೆ ಚೀಲದಂಗೆ!

ಎಲೆ, ಅಡ್ಕೆ, ಹೊಸೊಪ್ಪ್, ಸುಣ್ಣ
ಎಲ್ಲೊವು ಒಟ್ಟಿಗೆ ಕುದ್ದುಕ್‌ಂಡ್
ಸೊಂಟಲಿ ನೇತಾಡ್ವ ಚೀಲದೊಳ್ಗೆ
ಪಂಚಾತಿಗೆ ಹಾಕಿದಂಗೆ!!

ಶಾಲೆ ಮೆಟ್ಲೆ ಹತ್ತದ ಉಗ್ಗವ
ಅನುಭವದ ಮೂಟೆನೇ ಆಗಿದ್ದೊ
ಬವಣೆಲಿ ಬೆಂದ ಬೊದ್ಕುನ
ಜೋಕಾಲಿ ಹಂಗೆ ತೂಗಿ ನಡ್ಸಿದ್ದೊ!

ಉಗ್ಗವ ಕೊಡ್ತಿದ್ದ ನಾಟಿ ಮದ್ದಿಗೆ
ಎಂತೆಂಥದ್ದೊ ಕಾಯ್ಲೆ ಕಾಲ್ ಕೀಳ್ತಿತ್ತ್
ಬೆಸಗಡಿ ಕರಿಗೆ ಕಾಯೆಣ್ಣೆ ಬೆರ್ಸಿ ಹಾಕಿರೆ
ಬಾಯ್ಬುಟ್ಟ ಗಾಯನೇ ಗುಣ ಆಗ್ತಿತ್ತ್॥

ಬೆಸಗಡಿ ಮಾಂಬಳ, ಒಲೆಚಿಂಟೆ ಸಾಂತಾಣಿ
ಎಲ್ಲಾ ಉಗ್ಗವನೊಟ್ಟಿಗೆ ಹೋಗಿ ಬುಟ್ಟತ್‌ನೊರೆ,
ಕುರ್ಡ್, ನವಣೆ, ಚಾಮಕ್ಕಿ ಊಟ ಬುಟ್ಟ್‌ದ್
ವಿಷನೇ ಬೆರ್ತ ಆಹಾರ ತಿಂದ್ ಬಾಳ್ ಬರಡ್ ಆತ್!!

ಮನೆ ತುಂಬಾ ನೆಂಟ್ರ್‌ಗ, ಹಟ್ಟಿ ಪೂರ್ತಿ ದನಗ
ಸೆಗುಣಿ ಸಾರ್ಸಿದ ನೆಲದ ನಂಟ್ ದೂರಾತ್
ಕೂಡಾಡಿ ಮಾಡ್ತಿದ್ದ ಹಬ್ಬ ಹರಿದಿನಗ
ಉಗ್ಗವನೊಟ್ಟಿಗೆ ದೂರ ಹೋಗಿ ಬುಟ್ಟತ್!!

ಕುತ್ತುವ ಕಂಬ್ಳಿ, ಮಸಿ ಮಡ್ಕೆ
ಅರೆವ ಕಲ್ಲ್, ಮಿದಿವ ಒನ್ಕೆ ಅಟ್ಟ ಸೇರ್ತ್
ಎಲಡ್ಕೆ ಗುದ್ದಿಕ್‌ಂಡ್, ರಾಗಿ ಬೀಸಿಕ್‌ಂಡ್
ಹೇಳ್ತಿದ್ದ ಬುದ್ಧಿಮಾತ್ಗ ಗಾಳಿಗೆ ತೂರ್ತ್!

ಹಳ್ತ್ ಬುಟ್ಟ್‌ದ್ ಹೊಸ್ತ್ ಹಿಡ್ದದೆಲ್ಲಾ...
ಮನೆಗೆ ಮಾರಿ ನುಗ್ಗಿದಂಗಾತ್
ಮನೆ ಹೊಸ್ಲಿಗೆ ಬಂದ ಕೊರೊನಕ್ಕೆ ಕಡೆಗೆ
ಉಗ್ಗವನ ಕಷಾಯನೇ... ಮದ್ದ್ ಆತ್.

**ಲೀಲಾಕುಮಾರಿ ತೊಡಿಕಾನ**
ಉಪನ್ಯಾಸಕಿ, ಕುಶಾಲನಗರ

# ಅವ್ವ

ಊರಿಗೇ ಬಾರಿ ಪೊರ್ಲುನ ಗೂಡೆ
ಇಂದ್ ನಡ್ ಬಾಗಿದ ಅಜ್ಜಿ
ಕಂಡುಟು ನೂರಾರ್ ವಸಂತಗಳ
ವಿಶ್ವಕೋಶ ಆದು ಅವಳ ಜೀವನಾನುಭವ

ಹೆತ್ತುಟು ಆರ್ ಮಕ್ಕಳ
ಎಲ್ಲವೂ ಅಮೂಲ್ಯ ರತ್ನಗ
ಸಾಂಕಿಟು ಎಲ್ಲರ ಬಂಜ ಗೊತ್ತಿಲ್ಲದಾಂಗೆ
ಎರಡ್ ಗಂಡ್ ನಾಲ್ಕ್ ಹೆಣ್ಣ್

ಬೇಕಿತ್ಲೆ ವೈಭವದ ಬೊದ್ಕ್
ಹೊತ್ತೊತ್ತಿಗೆ ಗಂಜಿ ಸಿಕ್ಕಿರೆ ಸಾಕ್
ಹೈದಂಗೆ ಪೊರ್ಲುನ ಗೂಡೆ
ಗೂಡೆಗಳಿಗೆ ತಕ್ಕ ಹೈದಂಗ ನಿರ್ಕ್ ಆತ್

ಗೂಡೆಗ ಗಂಡನ ಮನೆಗೆ
ಹೈದಂಗ ಪೇಟೆನ ಕಡೆಗೆ
ಅಜ್ಜ ಅಜ್ಜಿ ಇಬ್ಬರೇ ನಾಡ್'ಲಿ
ಗುಂಯ್'ಗುಡುವ ಕಗ್ಗತ್ತಲೆನ ಕಾಡ್'ಲಿ

ಬೇಸಗೆ ರಜೆಗೆ ಎಲ್ಲವೂ ಊರ್'ಗೆ
ಪುಳ್ಳಿಕಳೊಟ್ಟಿಗೆ ಆಡಿಕೆ ಪುರ್ಸೊತ್ತಿಲ್ಲೆ ಅಜ್ಜ ಅಜ್ಜಿಗೆ
ನಮನಮೂನೆ ತಿಂಡಿಗ ಪುಳ್ಳಿಕಳ್ಲ್'ಗೆ
ಸಮೆ ಹೋದೇ ಗೊತ್ಲೆ ಅವ್ವ ತಾತಂಗೆ

ಮತ್ತೆ ಬನ್ನೆ ಹೇಳಿ ಹೋದ ಮಕ್ಕ
ಬೇಸಗೆ ಬಂದರೂ ಸದ್ದೇ ಇಲ್ಲೆ
ಅಂಗಳದ ಚಿಂಟೆಲಿ ಕುದ್ದ್ ದಾರಿ ನೋಡ್ವ
ಅವ್ವನ ಕಣ್ಣ್'ಗೆ ಆಯಾಸ ಇಲ್ಲೆ

**ವಿನೋದ್ ಮೂಡಗದ್ದೆ**




# ಚೊಂಬು



ತೆಕ್ಕಡೆ ಬಿ. ಕುಮಾರಸ್ವಾಮಿ

ನಂಗೆ ಅಂವ ಚೊಂಬು ಹಿಡ್ಸಿತ್ ರಾ, ಚೊಂಬು ತಕಂಡ್ ತಿರುಪತಿಗೆ ಹೋಗು. ನಿಂಗೆ ಚೊಂಬೇ ಗತಿ, ಖಾಲಿ ಚೊಂಬು, ಹಿಂಗೆಲ್ಲಾ ಜನ ಹೇಳ್ದು ಒಬ್ಬ ಮನ್ಸನ ಅಸಹಾಯಕ ಸ್ಥಿತಿ ನೋಡಿ. ಎಲ್ಲಾ ಕಳ್ಕಂಡವ, ಸಾಲ ಕೊಟ್ಟ್ ಮೋಸ ಹೋದಂವ, ಒಂದು ಗೂಡೆನ ಇಷ್ಟಪಟ್ಟ್ ಆ ಗೂಡೆ ಸಿಕ್ಕದೇ ಬೇರೊಬ್ಬನ ಮದುವೆ ಆದರೆ ನಿಂಗೆ ಚೊಂಬು ಹಿಡ್ಸಿ ಹೋತುರ ತೇಳುವೆ. ತಿರುಪತಿಗೂ ಚೊಂಬುಗೂ ಎಲ್ಲೊ ಹತ್ತರದ ನೆಂಟ್‌ಸ್ಥಾನ ಉಟ್ಟುಕಂಡದ್. ಹಿಂದೆಲ್ಲಾ ಹರಿಸೇವೆ ಮಾಡಿಕೆ ಮೊದಲ್ ಚೊಂಬು ತಕಂಡ್ ತಿರುಪತಿಗೆ ಹೋಗಿ, ಅಲ್ಲಿ ಕಾಣಿಕೆ ಎಲ್ಲಾ ಹಾಕಿ, ಮೂರು ನಾಮ ಹಾಕಂಡ್ ಗೋವಿಂದಾತಾ ತೀರ್ಥತಕಂಡ್ ಬಾತಿದ್ದೊ, ಹಂಗೆನೆ ಹರಿಸೇವೆಲಿ ಮನೆ ಮುಂದೆ ಗುಂಡ ಕಟ್ಟಿ, ಗೋಪುರಲಿ ಕಳಸ ಇಸುವೆ. ಮತ್ತೆ ಗುಂಡಾರದ ಮುಂದೆ ಚೊಂಬುಲಿ ನೀರ್ ಮತ್ತೆ ತಿರುಪತಿಂದ ತಂದ ತೀರ್ಥನ ಇಸುವೆ. ಪಂಡ್‌ನ ಕಾಲಂದ ನಾಗರಿಕತೆನೊಟ್ಟಿಗೆ, ಸಂಸ್ಕೃತಿ ನೊಟ್ಟಿಗೆ ಚೊಂಬು ಜನಾಂಗದೊಂದಿಗೆ ಬಳಕೆ ಆಕಂಡ್ ಬಂದಟ್ಟು. ದಿನ ಬಳಕೆನ ಒಂದು ಕಂಚಿಮುಟ್ಟು ಸಾಮಾನ್‌ಲಿ ಒಂದು ಪಾತ್ರೆ. ಹಂಗೆನೆ ಅದರ ಪಾತ್ರ ನಮ್ಮ ಜನಾಂಗದೊಟ್ಟಿಗೆ ಹಾಸ್‌ಹೊಕ್ಕಾಗುಟ್ಟ್.

ನೆಂಟ್ರ್ ಬಂದ್ ಮನೆ ಹತ್ತಿಕೆ ಮುಂದೆ, ದೂರಂದ ಕಂಡ ಮನೆ ಯಜಮಾನ್‌ತಿ ರಪ್‌ತ ಒಳಗೆ ಓಡಿಹೋಗಿ ಹಂಡೆ ಮೇಲೆ ಕುದ್ದಿದ್ದ ತಾಂಬ್ರದ ಚೊಂಬನ ಟಣಾಕ್‌ತ ತಕಂಡ್, ಹಂಡೆಗೆ ಮುಚ್ಚಿದ್ದ ಮುಚ್ಚುಳನ ಡೊರ್ರಾತ್ ಎಳ್ದ್, ಚೊಂಬುನ ಟೋಳಂಕತ ನೀರ್‌ಗೆ ಕಂತ್‌ಸಿ ತಾದು ಮನೆ ಮುಂದೆ ಬಂದ ನೆಂಟಂಗೆಸನ ಕಿವಿಗೆ ಕೇಳ್ದ್ ಅಂವ ಹಾಂಗೆ ಕಾಲಂದ ಎಕ್ಕಡ ಪಿಂಕ್‌ಸಿಕನ ಬಂದರಿಯಣ್ಣಾ ತೇಳಿ, ಯಜಮಾಂತಿ ನೀರ್ ಕೊಟ್ಟದೆ. ಬಂದ ನೆಂಟ ಭಕ್ತಿ ಭಾವಂದ ನಮಸ್ಕಾರ ತೇಳಿ ಚೊಂಬುನ ತಕಂಡ್ ಅಂಗಳದ ಒಂದು ಮೂಲೆಗೆ ಹೋಗಿ, ಅಲ್ಲೆ ಹಾಕಿದ ಚಪ್ಪುಡಿ ಕಲ್ಲ್‌ಲಿ ಕಾಲ್ ತೊಳ್ದ್, ಮುಖ ತೊಳ್ದ್ ಒಂದೆರಡ್‌ಹನಿ ತಲೆಗೆ

ಚಕ್ಳಿಸಿಕಂಡ್ ಕಾಲ್‌ದ್ ನೀರ್‌ನ ಮೆಟ್ಟ್‌ಲಿ ಹಾಕಿದ ಗೋಣಿಚೀಲಕ್ಕೆ ಒರ್ಸಿ ಒಳಗೆ ಬಂದ್, ಕೊಟ್ಟ ಬೈರಸ್‌ಲಿ ಮುಖ ಕೈ ವರ್ಸಿಕಂಡ್ ಕೈ ಕಾಲ್ ಹಿಡ್ಡ್‌ಕಂಡ ಮೇಲೆ ಮತ್ತೆ ಬಾಯಾರಿಕೆ ಕೊಟ್ಟ ಮೇಲೆ, ಆರೋಗ್ಯ ಸಮಾಚಾರ. ದೂರಂದ ಬಂದಂಗೆ ಕೈ ಕಾಲ್ ತೊಳ್ದ್ ಮನೆ ಹತ್ತುದು. ಸಂಪ್ರದಾಯದ ಜೊತೆಗೆ ಆರೋಗ್ಯ ದೃಷ್ಟಿಂದಲೂ ಒಳ್ಳೆದ್. ಈಗ ಆದರೆ ಬಕೇಟ್ ನೀರ್, ಸೋಪು, ಸ್ಯಾನಿಟೈಸರ್ ಬೇಕು. ನೋಡಿ ಎಷ್ಟೊಂದು ಬದಲಾವಣೆ ಜೊತೆಗೆ ಪರಿಸ್ಥಿತಿ, ಹಂಗೆ ಪರಿಸರ ಕೆಟ್ಟುಟ್ಟು.

ಈಗ ಒಂದು ತರ ಕಲಿಯುಗ, ಅದರ್ನ ಹಂಗೆ ಕರ್ದರೆ ಈಗನ ಜನಾಂಗಕ್ಕೆ ಹಿಡ್ಸುಲೆತ ಬದಲಾಯಿಸಿಕಂಡ್ ಫ್ಯಾಷನ್ ಯುಗ ತೇಳುವೆ, ಅದಿಕೆ ನೀರ್ ಚೊಂಬು ಕೊಟ್ಟರೆ ಅದರೊಳಗೆ ಎರ್ಡ್ ಬೆರ್ಳ್ ಹಾಕಿ, ಬಾಯಿಗೆ ಹಾಕಿ, ನೀರ್‌ನ ಹೀಂಪಿಕಂಡ್ ನ್ಯಾಪ್‌ಕಿನಲಿ ಕೈ ವರಸಿ, ಬಗ್ಗಿಕೆ ಕಷ್ಟ ಆದೆತಾ ಮೊಣಕಾಲ್‌ನ ಮುಟ್ಟಿ ಆಶೀರ್ವಾದ ಪಡ್‌ಕಂಬೂದು. ಅಂದರೆ ಇಂದ್ ನಾವು ಎಷ್ಟರ ಮಟ್ಟಿಗೆ ಮೇಲೆ ಬಂದೊಳತ. ಪಾದ ಮುಟ್ಟಿ ಸಾಷ್ಟಾಂಗ ನಮಸ್ಕಾರ ಮಾಡ್ತಾ ಮಾಡ್ತಾ ಹಂಞ ಹಂಞನೆ ಮೇಲೆ ಬಂದ್ ಬಂದ್ ಮೊಣಕಾಲ್‌ಂದ ಮೇಲೆ ಮೇಲೆ ಹೋಗ್ತಾ ಒಳೊ. ಜೊತೆಗೆ ಕಾಲ ಹಿಡ್ದ್ ಸ್ವಾಮಿ ತಕಂಬಕನ ಕಾಲ್‌ಲಿ ಚಪ್ಪಲ್ ಶೂ ಇರಿಕಾಗದ್. ಆದರೆ ಈಗ ಯಾರ ಬಿಚ್ಚುವೆ, ಅದಿಕೆ ಇರ್ದುದ್ ಇಂದ್ ಚರಣ ಸ್ಪರ್ಶ ದೂರಾದ್. ಈಗ ಕಳ್ಳ್ ಕುಡ್ದ್ ಟೈಟಾದರೂ ಕರ್ದ್ ಹೇಳುವೆ ಏಯ್ ಬಾರಾ ಕಾಲ್ ಹಿಡಿತಾ. ಆಶೀರ್ವಾದ ಹೆಂಗೆತ್ ತೇಳಿರ "ಆಯುರಾರೋಗ್ಯ ಸುಃಖ ಸಂಪತ್‌ಂದ ಬಾಳ್" "ದೀರ್ಘಾಯುಷು ಸಿಕ್ಕಲಿ" "ನೂರು ವರ್ಷ ಬಾಳ್" "ಸುಮಂಗಲಿ" "ಹತ್ತಾರ್ ಮಕ್ಕಳ್ ಹೆರ್‌ಬಲಾ" ಒಳ್ಳ ಚಾಕರಿ ಸಿಕ್ಕಲಿತಾ. ಆದರೆ ಇಂದ್ ಮನ್ಸ್‌ಲಿ ಹೆಂಗೆ ನೆನಸಿಕಂಡವೆತ ಗೊತ್ತುಲೆ. ಚೊಂಬು ಬೇರೆ ಬೇರೆ ಲೋಹಂದ ಮಾಡಿದ್ದರೂ ಹೆಚ್ ಬಳಕೆಲಿ ಇರ್ದುದ್ ತಾಮ್ರ, ಸ್ಟೀಲ್. ತಾಂಬ್ರದ ಚೊಂಬುಲಿ ನೀರ್ ತುಂಬಿಸಿಟ್ಟ್ ಕುಡ್ದರೆ ಆರೋಗ್ಯಕ್ಕೆ ಒಳ್ಳೆದ್. ಚೊಂಬು ಅಪ್ಪನ ಪಾಲ್‌ಂದ ಬಂದಿರ್ದು, ಗೂಡೆಗೆ ಬಳುವಳಿಯಾಗಿ ಬಂದಿರ್ದು, ಇಲ್ಲೇ ಸ್ವಆರ್ಜಿತ ಆಗಿರ್‌ದ್ದು ಪ್ರತಿ ಮನೆಲಿ ಚೂಂಬು ಉಟ್ಟು. ಸಭೆ ಸಮಾರಂಭ ಹತ್ತಾರ್ ಕಾರ್ಯಲಿ ಬಳ್‌ಸ್ತಾ ಒಳೊ. ಬೆಳಿಗ್ಗೆ ಎದ್ದಂಗೆ ಚೊಂಬುಲಿ ನೀರ್ ತುಂಬಿಸಿಕಂಡ್, ಮುಖ ತೊಳದ್, ಮನೆ ಗುಡ್ಸಿ ಹಂಗೆ ಮೂಡಣ ಬಾಗ್‌ಲ್ ಅಂಗಳ ಗುಡ್ಸಿ, ಒಂದು ಚೊಂಬು ನೀರ್

ಚಿಮುಕಿಸಿ, ರಂಗೋಲೆ ಹಾಕಿ, ಮತ್ತೆ ಮನೆ ಒಳಗೆಲ್ಲಾ ನೀರ್ ಚಿಮುಕಿಸಿ, ಹಿಂದೆಲ್ಲಾ ಹಂಞ ಸಗಣಿ ಹಾಕಂಡ್, ಮನೆ ಶುದ್ಧ ಮಾಡ್ತಿದ್ದೊ. ದೇವುರ ದೀಪ ಇಸಿ ಸುತ್ತ್ ಬಂದ್ ಬೆಂಕಿ ಮಾಡ್ತಿದ್ದೊ. ಹಂಗೆನೆ ಮತ್ತೆ ಒಂದು ಚೊಂಬು ನೀರ್ ತುಂಬಿಸಿ, ಅದರ ಒಳಗೊಂದು ಹೂವು ಹಾಕಿ ಮನೆ ಜಗ್‌ಲ್, ಇಲ್ಲೆ ಮೆಟ್ಟ್‌ಲಿ ಇಸುತ್ತಿದ್ದೊ, ಸೂರ್ಯೋದಯಂದ ಬದಕ್‌ನ ಒಟ್ಟೊಟ್ಟಿಗೆ ಬಳಕೆ ಆಗ್‌ತಾ, ಕತ್ತಲೆಗೆ ದೀಪ ಇಸ್‌ಕನ; ಬೆಳಿಗ್ಗೆ ಮಾಡ್ದ ರೀತಿಲೆ ಮಾಡ್ತಿದ್ದೊ. ಕತ್ತಲೆಗೆ ಶಂಖ ಊದವರ ಮನೆಲಿ ಶಂಖ ಊದಿ ಆದ ಮೇಲೆ ಒಂದು ಚೊಂಬು ನೀರ್ ತಕಂಡ್ ತೊಳ್ದ್ ಇಸುವ ಪದ್ಧತಿ, ಮತ್ತೆ ಬೆಳಿಗ್ಗೆ ಮನೆ ಮುಂದೆ ಇಸಿದ ಚೊಂಬು ನೀರನ ಕತ್ತಲೆಗೆ ಬದ್‌ಲಾಯಿಸಿ ಇಸುವೆ, ಹಿಂದೆನ ಕಾಲಲಿ ಕಾಡ್ ಮದ್ಯ ಒಂದೂಂದೆ ಮನೆ ಇರ್ದುದ್, ಆಗ ಕತ್ತಲೆಗೆ ಹಾವು ಇನ್ನಿತರ ಜಂತುಗ ನೀರಿಗಾಗಿ ಮನೆ ಕಡೆ ಬಾಕನ ಜಗ್‌ಲ್‌ಲಿ ಇದ್ದ ನೀರ್ ಕುಡ್ದ್  ಹೋಗಲಿತೆನೋ ಗಾಡ ನಂಬಿಕೆಂದ,ಭೂತ,ಪ್ರೇತ ಮನೆಗೆ ಬಂದರೆ ಬಾಯಾರಿಕೆ ತೀರಸಿಕಂಡ್ ಹೋಗಲಿತನೋ, ಸಂಪ್ರದಾಯಕ್ಕೆ ಇಸ್‌ತ್ತಿದ್ದೊ.

ಗೌಡ ಜನಾಂಗಲಿ ಗೂಡೆ ಯವ್ವನವತಿ ಆಕನ, ಅಂದರೆ ಋತುಮತಿ, ಅರೆ ಭಾಸೆಲಿ ಗೂಡೆ ನೆರಿಯದು, ತೇಳುವೆ. ಇಂತ ಗಳಿಗೆಲಿ ಊರ್‌ನ ಮುತ್ತೈದೆಂಗ, ಸುದ್ದಿ ತಿಳ್ದಂಗೆ ಸೇರಿ, ಒಂದು ಮುಕ್ಕಾಲ್‌ನ ಅಂಗಳಲಿ ಇಸಿ ಅದರ್ಲಿ ಗೂಡೆನ ಕುದ್ದುರ್ಸಿ, ಐದ್ ಚೊಂಬು ನೀರ್ ಹೊಯ್ದ್ ಹೊಲೆ ತೆಗ್ದವೆ. ಅದಾದ ಮೇಲೆ ದೇವಸ್ಥಾನಂದ ಪುಣ್ಯಾರ್ಚನೆ ಚೆಂಬುಲಿ ತಂದ ನೀರಂದ ಮನೆ ಶುದ್ಧಿ ಮಾಡುವೆ. ಮುಂದೆ ಪ್ರಾಯಕ್ಕೆ ಬಂದ ಗೂಡೆನ ವೀಳ್ಯ ಶಾಸ್ತ್ರ ಪ್ರಾರಂಭ ಮಾಡಿ ಮುಗ್ದ ಮೇಲೆ ಲಗ್ನ ಪತ್ರಿಕೆ ಬರ್ದ್ ಸೈನ್ ಹಾಕಿ ಚೊಂಬುಲಿ ಇದ್ದ ನೀರ್ ಮುಟ್ಟಿ ಎದ್ದವೆ. ಮದುವೇಲಿ ಗಂಗೆ ಪೂಜೆ ಆಗಿ ಚಪ್ಪರದ ಮುಂದೆ ಬಂದ್ ಮಧು ಮಂಜ, ಮಧು ಮಗಳ್‌ಗೆ ಆರತಿ ಮಾಡಿಕೆ ಮುಂದೆ ಸಣ್ಣ ಮಕ್ಕ ಚೊಂಬುಲಿ ನೀರ್ ತಂದ್ ಕಾಲ್ ತೊಳ್ದವೆ. ಆಗ ಮದು ಮಕ್ಕ ಚೊಂಬುಗೆ ಎಲೆ ಅಡಿಕೆ ದುಡ್ಡು ಹಾಕುವೆ ಹಾಲ್ ತುಪ್ಪ ಶಾಸ್ತ್ರ ಮಾಡ್ಕನ ಮದು ಮಕ್ಕಳ ಮುಂದೆ ಒಂದು ಚೊಂಬುಲಿ ನೀರ್ ಇಸಿ ಬೆರ್ಳ್‌ನ ಕಂತಿಸಿ ಶಾಸ್ತ್ರ ಮಾಡುವೆ. ಮತ್ತೆ ಕೈಗೆ ಮದ್‌ರಂಗಿ ಮಡ್‌ಗುದು. ಬಾಡೆಲಿ ಹಸೆ ಬರ್ದದರ ಕೆಳಿಗೆ ಕುದ್ದ, ಆಗ ಈಗನಂಗೆ ಕೋನ್, ಆಲ್ತಾ ಅದ್ ಇದ್‌ತ ಮೇಂದಿ ಇತ್ತಲೆ. ಏನಿದ್ದರೂ ಮದುರಂಗಿ ಎಲೆನ ಲಾಯಿಕ ಅರ್ದ್, ಗೊತ್ತಿರುವ ನೆಂಟ್ರಗ ಚಕ್ಕಳ್

ಪಕ್ಕಳ್ ಹಾಕಿ ಕುದ್ದ್ ಬಲ್ದ್ ಕೈಗೆ ಸೂರ್ಯ,ಎಡ್ದ ಕೈಗೆ ಚಂದ್ರ ಬರೆತ್ತಿದ್ದೊ. ಈಗ ಎಲ್ಲಿತ ಇಲ್ಲೆ ಮದು ಮಂಞ ಗ್ಲಾಸ್ ಹಿಡ್ದ್ ಕುಡಿತ ಇದ್ದರೂ, ಈ ಕಡೆಂದ ಯಾರೋ ಒಬ್ಬನ ಹೊರಗಡೆಂದ ಕರ್ಸಿ ಮದುರಂಗಿ ಹಾಕ್‌ಸವೆ. ಹಿಂದೆಲ್ಲಾ ಅಂಗೈಗೆ ಹಾಕ್ತಿದ್ದ ಮದ್‌ರಂಗಿ ಬರ್ತಾ ಬರ್ತಾ ಮೊಣ ಕೈ ದಾಟಿ ಕುತ್ತಿವರೆಗೆ ಬಂದುಟ್ಟು. ಹಿಂದೆ ಮದ್‌ರಂಗಿ ಗಿಡಂದ ಎಲೆ ಕೊಯ್ಯಕ್ಕೆ  ಮುಂದೆ ಅದರ ಬುಡಕ್ಕೆ ಚೊಂಬುಲಿ ನೀರ್ ಹೊಯದ್ ಕೀಳುವ ಪದ್ಧತಿ. ಧಾರೆ ಎರಿಯಕೆ ಮುಂದೆ ಅಲ್ಲಿ ಸೇರ್ದವುಕೆ ಚೊಂಬುಲಿ ನೀರ್ ಕೊಟ್ಟ್. ನೀರ್ ಮುಟ್ಟಿ ಕಾರ್ಯಕ್ಕೆ ಮುಂದಾದವೆ. ಗೂಡೆನ ಅಪ್ಪ ಚೊಂಬು ಹಿಡ್ದ್ ನಿಂತಿದ್ದವೆ. ಮುಂದೆನ ಕಾರ್ಯ ಕಂಚಿಮೆಗೆ ಕೈ ಮುಗ್ದ್ ನಮಸ್ಕಾರ ಮಾಡಿ ಎರಡೂ ಕಡೆಂದ ಕಂಚಿಮಿಲಿ ಇಸಿದ ಗಿಂಡಿಗೆ ಅದಲ್ ಬದಲ್ ಮಾಡಿ ಅದರ್ಲಿರುವ ಹಾಲ್‌ನ ಅಪ್ಪ ಹಿಡ್ದ ಚೊಂಬಿಗೆ ಹೊಯ್ದವೆ. ಮುಂದೆ ಅಪ್ಪ ಅದೇ  ಚೊಂಬುಂದ ಹಾಲ್‌ನ ಮದು ಮಕ್ಕಳ ಕೈಗೆ ಹೊಯ್ದ್, ಧಾರೆ ಎರ್ದ್, ಕೊಟ್ಟವೆ. ಧಾರೆ ಎರಿಯೋದು ಬಹಳ ಪವಿತ್ರ ಘಳಿಗೆ. ಆಗ ಎಲ್ಲವೂ ಒಂದು ರೀತಿ ದೇವ ಸಭೆಲಿ ಭಕ್ತಿ ಬಾವುಕರಾಗಿ ಬರಿ ಕಾಲ್‌ಲಿ ನಿಂತಿದ್ದವೆ. ಆ ಕಾಲ ಆದರೆ ಈಗ ಎಲ್ಲಾ ಮಕ್ಕಳ ಕೈಲಿ ಫೋನ್ ಧಾರೆ, ಎರೆವಂತ ಇಲ್ಲೆ, ಹೆಣ್ಣ್ ವಹಿಸಿ ಕೊಡವವಂತ ಇಲ್ಲೆ, ಎಲ್ಲವ್ಕೂ ಸೆಲ್ಫಿ, ಗೂಡೆದ್, ತಾಳಿದ್ ಗಂಟ್ ಹಾಕುದು, ಎಲ್ಲಾ ಅದೆಂತದೂ ಝೂಮ್ ಮಾಡಿ ತೆಗೆದು ಗಡ. ಸುಟ್ಟು ಹೋಗಲಿತ್ತ, ಮಾತಾಡಿಕೆ ಅದುಲೆ.ಕಾರ್ಯಕ್ರಮ ಮುಗ್ದಂಗೆ ವಕ್ಕುಲೆಜ್‌ಮಾನ ಚೊಂಬುಲಿ ನೀರ್ ಹಿಡ್ದ್ ಸಭೆ ಸರ್ವರ್‍ನ ಊಟಕ್ಕೆ ಕರ್ದೆ. ಮುಹೂರ್ತ ಕಳ್ದ್ ಹೆಣ್ಣ್ ಗಂಡ್ ವಹಿಸಿ ಅದಂಗೆ ಹೈದನ ಮನೆಲಿ ನೀರ್ ಮದುವೆ. ಗೂಡೆ ಬಾವಿಂದಬಿಂದಿಗಲಿ ನೀರ್ ಹೊತ್ತ್ ತಂದರೆ, ಹೊಡಿ ಮಕ್ಕ ಚೊಂಬುಲಿ ತಂದವೆ. ಕತ್ತಲೆದ್ ಮಡ್ಲಕ್ಕಿ ಪಾಯಸ ಊಟ ಮಾಡಿ. ಪೆಟ್ಟಿಗೆ ನೋಡಿ, ಕ್ವಾಂಬರೆ ಕೂಡ್ದು, ಗಂಡ ಹೆಣ್ಣ್‌ನ ಸಂಗಮ. ಬೆಂಚಿ ಮೂಲೆಲಿ ಕುದ್ದ ಅಜ್ಜಂದರ್ ಅಜ್ಜಿಕ ಮೆಲ್ಲ ಅಲ್ಲಿಂದ ಪೀಂಕ್‌ವೆ. ನಮಿಗೆಂತ ಕೆಲ್ಸ ಇಲ್ಲಿತಾ ಕುಣ್ದ್ ಕೈ ಕಾಲ್ ಬೊಚ್ಚಿದವು ಅವರ ಅವರ ಮನೆ ಕಡೆ ರೆಟ್ಟಿರೆ, ಕುಡ್ದ್ ಟೈಟಾದ ಗಂಡನ ಹೆಣ್ಣ್  ಹೆಗಲ್ ಹಿಡ್‌ಕಂಡ್ ಗಂಡನ ಶೂನ ಕೈಲಿ ಹಿಡ್ಕಂಡ್, ಗಂಡಂಗೆ ಬೊಯಿಕಂಡ್, ಪುಕ್ಸಟೆ ಸಿಕ್ಕರೆ ಹಿಂಗೆ ಕುಡಿಯೋದಾ, ಕುಡ್ದದಲ್ಲಾ ಮೀದದ್. ಹೆಣ್ಣ್ ಹೇಳ್ಕನ ಗಂಡ ಹೆಣ್ಣಿಗೆ ಹೇಳ್ದೆ ಮನೆಗೆ ಬಾ ನಿಂಗೆ ಕಲ್ಸಿನೆತಾ. ವಾಲಗ ಸದ್ದಲಿ ಇದ್

ಯಾರಿಗೂ ಕೆಳ್ದುಲೆ. ಮಕ್ಕ ಅಂತು ಅಂದ್ ಮನೆಗೆ ಬಾದುಲೆ. ಅಲ್ಲೆಲ್ಲೊ ಸಿಕ್ಕಿದಲ್ಲಿ ಹುಕ್ಕಿ ಮಲ್ಗಿಗ್ದವೆ. ಈ ಕಡೆ ಹೊಸಬರ್ ಕ್ವಾಂಬರೆ ಬಾಗ್‌ಲ್ ಹಾಕಿದಂಗೆ ನಾಚಿಕೆಂದ ಗೂಡೆ ಹೈದನ ಹತ್ರ ಬಂದ, ಗಂಡನ ಪಾದನ ಬೋಗುಣಿಲಿ ಇಸಿ ನೀರ್ ತುಂಬಿದ ಚೊಂಬು ತಕಂಡ್ ಕಾಲ್ ತೊಳ್ದ್, ಹಾಲ್ ಕುಡ್ಸಿ, ಹಣ್ಣ್ ತಿನ್ಸಿ, ಹಂಗೆನೆ ಹೆಗ್‌ಲಿಗೆ ವರ್ಗಕನ ಗಂಡ ದೀಪ ಉರ್ಗಿ ಕೆಡ್ಸಿದ್. ಉರ್ಕೊಳಿ ಮಕ್ಕ ಕಟ್ಲ್ ಕಾಲಿಗೆ ಕಟ್ಟಿದ ಗಂಟೆ ಮಣಿ ಸದ್ದ್ ಕೇಳ್ದತಾ ಅಲ್ಲಿ ಇಲ್ಲಿ ಹಂಗೆನೆ ನಿದ್ದೇ ಹೋದವೆ.

ಜನ್ಮ ಪಡ್ದ್‌ಕಂಡ್ ಬಂದ ಜೀವ, ಜೀವನದ ಯಾತ್ರೆ ಮಾಡ್ತಾ ಮಾಡ್ತ ಕಡೆಗೊಂದು ದಿನ ಅದರ್ನ ಮುಗ್ಸಿ ಒಬ್ಬನೆ ಹೋರ್ಟ್ ಹೋದೆ. ಅಂವ ಎಷ್ಟೋ ಆಸ್ತಿ, ಹಣ ಸಂಪಾದನೆ ಮಾಡಿರ್ದು, ಬಹಳ ದೊಡ್ಡ ಮನೆ ಕಟ್ಟಿರ್ದು, ಅದರೆ ಅಂವನ ಹೊತ್ತ್ ಕಂಡ್ ಹೋಗಿ ಸುಡುಕಳಿಲಿ ಸೌದೆ ಇಸಿ ಸುಟ್ಟವ್. ಮಾರ್ನೆ ದಿನ ಬೆಳಗೆ ಬೂದಿ ಉಳ್ದ್ ಕೊಳ್ಳಿ ಸೌದೆ. ಈಗ ಆ ಜಾಗಕ್ಕೆ ಜಾಗ ಕೂಡ್ಸುಲೆ ಕಡೆಗೆ ಕೂಡ್ಸುದು ಕೊಳ್ಳಿ. ಬೆಳಿಗ್ಗೆ ಚೊಂಬುಲಿ ಹಾಲ್ ತುಪ್ಪ ತಂದ್ ಕಾಟಕ್ಕೆ ಹೊಯ್ದ್ ಸುಡದೇ ಇರುವ ಕೊಳ್ಳಿ, ಮೂಳೆ, ಎಲ್ಲಾ ಸೇರ್ಸಿ ಹೋದವೆ ಮೂರನೆ ಶುದ್ಧಲಿ ನೀರ್ ನೆರಳ್ ಮಡ್ಗ್‌ಕನ; ಹೆಣ ಮಲ್ಗಿಸಿದಲ್ಲಿ ಶುದ್ಧಲಿ ನೀರ್‌ನೆರಳ್ ಮಡ್ಗ್‌ಕನ ಹೆಣ ಮಲ್ಗಿಸಿದಲ್ಲಿ ಬೂದಿ ಹರಡಿ, ಒಂದು ಕಡೆ ಬೂದಿ ಮದ್ಯಲಿ ಚೊಂಬುಲಿ ನೀರ್ ಇಸಿ ನೂಲ್‌ಲಿ ಮಸಿ ಕೆಂಡನ ಕಟ್ಟಿ ನೀರಿಗೆ ಮುಟ್ಟುವಂಗೆ ಇಳ್ಸಿಬುಟ್ಟು, ಮತ್ತೊಂದು ಕಡೆ ಬೂದಿ ಮದ್ಯಲಿ ಎಳೆ ನೀರ್ ಇಸಿ ಹಂಗೆನೆ ಅರಿಸಿನ ಕೊಂಬು ಇಳ್ಸಿ ಬುಟ್ಟವೆ. ತೀಕೆ ನಿಂತಂವ ಮನೆ ಮುಂದೆ ಮೆಟ್ಲಲಿ ಒಂದು ಚೊಂಬು ನೀರ್ ಹಿಡ್ಕಂಡ್ ನಿಂತ್ ಸ್ವಲ್ಪ ನೀರ್ ಚಿಮುಕಿಸಿ, ಒಂಟಿಕಾಲ್‌ಲಿ ನಿಂತ್, ಕೈ ಎರ್ಡರ ತಲೆ ಹಿಂದೆ ಕಟ್ಟಿ ಸಂಬಂಧ ವಾಚಕ ಶಬ್ಧಲಿ ಕರ್ದವೆ. ಮಾರನೇ ದಿನ ಮನೆ ಮುಂದೆನ ಮೆಟ್ಲ್‌ಲಿ ತೀಕೆ ನಿಂತವ ಮೊಣಕಾಲ್ ಊರಿ ಕುದ್ದಿರ್‌ಕನ ಹಜಾಮ ಚೊಂಬುಲಿ ತಲೆ ತೊಳ್ದ್ ಕೂದಲ್, ಗಡ್ಡ, ಮೀಸೆ ಬೋಳ್ಸಿದೆ. ಮತ್ತೆ ಸುಡುಕುಳಿಗೆ ಹೋಗಿ ಬಂದ ಮೇಲೆ ಮಡಿವಾಳ ಚೊಂಬುಲಿ ತಂದ ಖಾರೆ ನೀರ್‌ಲಿ ಎಲ್ಲರ್ನ ಶುದ್ಧೀಕರಿಸಿದ ಮೇಲೆ ದೇವಸ್ಥಾನಂದ ಚೊಂಬುಲಿ ತಂದ ಪುಣ್ಯ ನೀರ್‌ನ ಎಲ್ಲವುಕೂ ಹಾಕಿದ ಮೇಲೆ ಮುಂದೆನ ಕಾರ್ಯ ಮುಗ್ದಂಗೆ ಊಟಕ್ಕೆ ಕುದ್ದ್, ಇಕ್ಕಿದ ಮೇಲೆ ಕುಂಟಿಗೆ ನಿಂತಂವ, ಚೊಂಬುಲಿ ನೀರ್ ಹಿಡ್ದ್ ಸರ್ವರನ್ನ ಊಟಕ್ಕೆ ವಿನಂತಿಸಿ ಕಂಡದೆ. ತಿಥಿಲಿ ಎಡೆ ಹಾಕುವಲ್ಲಿ

ಒಂದು ಚೊಂಬು ನೀರ್ ಇಸುವೆ ಹದಿನಾರರ ಕೋಲೆ ಕೂಡ್ಸ್‌ಕನ ಒಂದು ಚೊಂಬು ನೀರ್ ಇಸುವೆ. ಮುಂದೆ ಪಿಂಡ ಪ್ರದಾನ ಮಾಡ್‌ಕನ ಬ್ರಾಮಣ ಒಂದು ಚೊಂಬುಲಿ ನೀರ್ ಇಸಿಕಡಂದೆ. ಹಂಗೇನೆ ಕುಂಡಿಕೆಲಿ ಸ್ಥಾನ ಮಾಡ್‌ಕನ ತಲೆಗೆ ಚೊಂಬುಲಿ ನೀರ್ ಹೋಯ್ದುವೆ.

ಯಾವುದೇ ಪೂಜೆ ಮಾಡ್‌ಕನ ಚೊಂಬುಲಿ ನೀರ್ ತುಂಬಿಸಿ ಅದರ್ಲಿ ಮಾಯನ ಎಲೆ ಇಸಿ ಮದ್ಯಲಿ ತೆಂಗಿನ ಕಾಯಿ ಇಸುವೆ. ಕಳಸ ಹಿಡಿಯಕನ ಸನ ಇದರ್ನ ಬಳ್ಸಿವೆ. ಹಾಲ್ ಕರಿಯಕೆ ಹೋಕನ ಒಂದು ಚೊಂಬು ನೀರ್ ತಕಂಡ್ ಹೋಗಿ ಹಸ್‌ನ ಕೆಚ್ಚ್‌ಲ್ ತೊಳ್ದ್. ಅದೇ ಚೊಂಬುಲಿ ಹಾಲ್ ಕರ್ಕ ಬಾತಿದ್ದೊ. ಆಗ ಎಲ್ಲಾ ನಾಡ್ ದನ ಹಾಲ್ ಅಷ್ಟೇ ಕೊಡ್ತಿದ್ದದ್ ಬುಡು. ಟ್ರಾಕ್ಟರ್, ಟಿಲ್ಲರ್ ಇಲ್ಲದ ಆ ಕಾಲಲ್ಲಿ ಎತ್ತ್‌ಗಳ ಕಟ್ಟಿಕಂಡ್ ಹರ್‍ರೋ.......ಹೀ...... ತೇಳಿಕಂಡ್ ಹೂಡಿಕಂಡ್ ಇರ್‌ಕನ, ಸ್ಕೂಲಿಗೆ ಹೋಗುವ ಮಕ್ಕಳಿಗೆ ಬೆಳಿಗ್ಗೆ ಅದೊಂದು ಕೆಲ್ಸ ಇತ್ತ್ ಎಂತ ಜಡಿ ಮಳೆ ಇದ್ದರೂ ಒಂದು ಚೊಂಬುಲಿ ಕಾಫಿ ತುಂಬಿಸಿ ಕಂಡ್, ಒಂದು ಕಂತೆ ಹುಲ್ಲು, ರೊಟ್ಟಿ ಹಲ್ಸನಕ್ಕಿ ಪಜ್ಜಿ, ಕಣಿಲೆ ಸಾರ್, ಅಳುಂಬು ಗೈಪ್, ಕಟ್ಟಿಕಂಡದ್, ಕೊಡಿಕೆ ಹೋಕಾಗಿ ಇತ್ತ್, ಗದ್ದೆಲಿ ಅವ್ವ ಸಣವ, ದೊಡ್ಡವ್ವ, ಅತ್ತೆಕ ಕಳೆ ಕೀಳ್‌ಕನ ಅವುಕೆ ಚೊಂಬುಲಿ ಕಾಫಿ ತಕಂಡ್ ಹೋಗಿ ಕೊಟ್ರೆ, ಬಾಕನ ಅದರ್ಲಿ ತುಂಬಾ ನುಲಿ ಎಸ್‌ಂಡ್ ಹಿಂಗೆ ಸೌದೆ ಒಡೆಕನ, ಬಗಲೆ ತೆಗೆಕನ, ಗದ್ದೆ ಕೊಯ್ಯಕನ ಎನೇ ಕೆಲ್ಸ ಇದ್ದರೂ ಚೊಂಬುಲೇ ಕಾಫಿ, ನೀರ್. ಈಗ ಪ್ಲಾಸ್ಟಿಕ್ ಕುಪ್ಪಿ ಬಂದ್ ಎಲ್ಲಾ ಹಾಳ್. ಹಿಂದೆ ಮನೆಗಳ್ಲಿ ಒಂದೂ ಎರಡೊ ಚೊಂಬು ಇರ್ತಿತ್. ಆದರೆ ಜನ ಹತ್ತಾರ್. ಎಲ್ಲವುಕೆ ಒಂದೆ ಚೊಂಬು ಮುಖ ತೊಳೆಯಕೆ. ಕಾಲ್ ತೊಳೆಯಕನ: ಕಾಲ್ ತೊಳಿಯಕೆ, ತಿಕ ತೊಳಿಯಕೆ, ಮುಖ ತೊಳೆಯಕನ; ಅದೇ ಚೊಂಬು ಬಳ್ಸ್‌ತ್ತಿದ್ದೊ. ಹಿಂದೆ ಮುಖ ತೊಳೆಕನ ಒಲೆ ಮೇಲೆ ಇದ್ದ ಮಡಿಕೆಂದ ಒಂದು ಚೊಂಬು ಬಿಸಿ ನೀರ್ ಕಂತಿಸಿ ಕಂಡ್, ಒಂದು ಕೊಳ್ಳಿ ಹೊತ್ತ್‌ತ್ತಿದ್ದ ಸೌದೆನ ಎಳ್ದ್ ಅದರ ತುದಿಲಿದ್ದ ಕೆಂಡನ ಕುಟ್ಟಿ ಕೈಯಿಂದ ಎತ್ತಿ ಚೊಂಬೂಳೆಗೆ ಚೊಯಿಂಕತ ಹಾಕಿ ಅಂಗಳ ಮೂಲೆಗೋ ಜಗಲ್ ತುದಿಗೋ ಹೋಗಿ ಮಸಿನ ಕರ್ ಕುರ್‌ತ ಅಗ್ದ್ ಹಲ್ಲು ತಿಕ್ಕಿ ಮುಖ ತೊಳ್ದ್ ಬಾತಿದ್ದೊ. ಹೇಲ್ ಬಾಕನ ಚೊಂಬುಲಿ ನೀರ್ ತಕಂಡ್ ಕಾಫಿ ತೋಟಕೆ ಓಡ್ತಿದ್ದೊ. ಸಾಕಿದ ಹಂದಿ, ನಾಯಿಗ ಒಟ್ಟಿಗೆ ಓಡಿ ಬಾತಿದ್ದೊ. ಕೆಲ ಸರ್ತಿ ಹಂದಿ ಮುಂದೆ ದೂರಲಿ ಮಡಿಗಿದ್ದ ಚೊಂಬುನ ದುಂಡಲಿ

ಕುತ್ತಿ ಬೀಳ್ಸ್‌ತ್ತಿತ್ತ್ ಇಳ್‌ಜಾರ್ ಇದ್ದರೆ ಡೊಣಡೊಣತಾ ಉರ್‌ಳಿ ಕಂಡ್ ಹೋಕನ; ಚೊಂಬುಗಾಗಿ ಚೆಡ್ಡಿ ಹಿಡ್ಕಂಡ್ ಓಡ್ದ್ ಹಳೆ ನೆಂಪು. ಅವ್ವ ರೊಟ್ಟಿಗೆ ಬಂದ ಕಲ್ಸ್‌ಕನ, ಕಡೆಕಲ್ಲ್‌ಲಿ ಮಸಾಲೆ, ಪಜ್ಜಿ, ಕಡೆಕನ ಚೊಂಬುಲಿ ನೀರ್ ತುಂಬಿಸಿಕಂಡ್ ಕೂರ್ತಿತ್, ಅದರ್ನ ಹಾಳಾದ ಕೊತ್ತಿ ಒಂದೊಂದು ಸರ್ತಿ ನೆಕ್ಕಿ ಬುಡ್ತಿತ್ತ್.

ಕಾರ್ತಿಂಗ ಬಾಕನ ಗುಳಿಂಜ, ಚೌಂಡಿಗೆ ಹಿಂಗೆ ಅವರವರ ದೆವ್ವಕ್ಕೆ ಕೊಡುವ ಕಾರ್ಯಕ್ರಮಲಿ, ಒಂದು ಚೊಂಬುಲಿ ನೀರ್ ತುಂಬಿಸಿ ಅದಿಕೆ ಹಂಞ ಅರ್‌ಸ್‌ಣ ಮತ್ತೆ ಸುಣ್ಣ ಹಾಕಿ, ಕುರ್ದಿ ನೀರ್‌ತಾ ಮಾಡ್ತಿದ್ದೊ ಸ್ಥಾನಕ್ಕೆ ಹೋಗಿ ಸ್ವಚ್ಛಮಾಡಿ ಸ್ವಲ್ಪ ಕುರ್ದಿ ನೀರ್ ಹನ್‌ಕಿಸಿ ಅಲ್ಲಿ ಬಾಳೆಗೊನೆ ಹೂ ಗಣಪತಿಗೆ ಎಲ್ಲಾ ಇಸಿ ಕಲ್ಲಿಗೆ ಕೋಳಿನ ಹಂದಿನ ತಲೆ ಕೊಯ್ದ್ ಕಲ್ಲಿಗೆ ರಕ್ತ ಬುಟ್ಟ ಮೇಲೆ ಕಡೆಗೆ ಚೊಂಬುಲಿದ್ದ ಕುರ್ದಿ ನೀರ್‌ಂದ ಕಲ್ಲ್‌ನ ತೊಳೆತ್ತಿದ್ದೊ. ಉಂಡದ್ ತಿಂದದ್ ಹೆಚ್ ಕಮ್ಮಿ ಆದರೆ, ಮಕ್ಕಳಿಗೆ ಕಟ್ರ ಆದರೆ, ಕೊದಿ ಆತ್‌ತಾ ಅದರ್‌ಂದ ಹೊಟ್ಟೆ ಕಚ್ಚಿದೆ ತೇಳಿ ಅಂತ ಮಕ್ಕಳಿಗೆ ಬಟ್ಲ್‌ಲಿ ಊಟ ಕೊಟ್ಟ್, ಊಟ ಆದ ಮೇಲೆ, ಅದೆ ಬಟ್ಲ್‌ಗೆ ಕೈ ತೊಳ್ಸಿ ಮಡೆ ನೀರ್‌ಲಿ ಬಟ್ಲ್ ಒಳಗೆ ಒಂದು ನೆಣೆ ಬತ್ತಿ ಹೊತ್ತಿಸಿ, ಅದರ ಮೇಲೆ ಒಂದು ಚೊಂಬುನ ಕೌಂಚಿ ಹಾಕ್‌ಕನ ಚೊಂಯೋ ತೇಳಿ ಅದರ ಒಳಗೆ ಗುಳುಗುಳುತ ನೀರ್ ಹೋದೆ. ಅದರ ಸದ್ದ್‌ನ ಚೊಂಬುನ ಬಟ್ಟಿ ನೋಡಿ ಗೊತ್ತು ಮಾಡಿಕಂಡ್ ಕೊದಿ ಹೋತ್‌ತಾ ಸಮದಾನ ಪಡ್‌ತಿದ್ದೊ. ಮಕ್ಕ ಹಿಂದೆ ಕೈನ ಮೇಜಕ್ಕೆ ಬಡ್ದ್ ಮತ್ತೆ ಕೈ ಮೇಲೆ ಕೈನ ಬಡ್ದ್ ಚೊಂಬುತಕ ತಿಕ ತೊಳಿ, ಚೊಂಬುತಕ ತಿಕ ತೊಳಿ ತೇಳಿಕಂಡ್ ಆಟ ಆಡ್ತಿದ್ದೊ. ಅಯ್ಯೋ ಇದೆಂತ ಮಾರಾಯ ಚೊಂಬುನ ಕತೆ, ಅಂದಿಗೂ ಚೊಂಬು, ಇಂದಿಗೂ ಚೊಂಬು, ಮುಂದಕ್ಕೂ ಚೊಂಬೇ. ಇದರ್ನ ಬರ್ದ್‌ದ್ ಯಾವ ಚೊಂಬುಕುಟ್ಟಿ ಮಾರಾಯತ ಹೇಳ್ಬಡಿ.

---

**ತೆಕ್ಕಡೆ ಬಿ. ಕುಮಾರಸ್ವಾಮಿ**
ಮುತ್ತಾರ್ಮುಡಿ
ಮೊ:ಸಂ:9483234335.

# 2021ರ ಏಪ್ರಿಲ್‌ಂದ ಜೂನ್‌ವರೆಗೆ ಕೊನೆಯವರೆಗೆ ಅಕಾಡೆಮಿ ಹಮ್ಮಿಕಂಡಿದ್ದ ಕಾರ್ಯಕ್ರಮಗ

1. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ, ಅರೆಭಾಷೆ ಗೌಡ ಸಮಾಜ, ಐಗೂರು ಇವುಗಳ ಕೂಡುಕಟ್ಟ್‌ಲಿ ಏಪ್ರಿಲ್ 15ರ್‌ಂದ 17ರ ವರೆಗೆ ಅರೆಭಾಷೆ ಸಂಸ್ಕೃತಿ ಶಿಬಿರನ ಅಯೋಜಿಸಿದೊ. ಏಪ್ರಿಲ್ 15ರಂದ್ ಅರೆಭಾಷೆ ಸಂಸ್ಕೃತಿ ಶಿಬಿರನ ಅರೆಭಾಷೆ ಗೌಡ ಸಮಾಜ, ಐಗೂರುನ ಅಧ್ಯಕ್ಷರಾದ ಶ್ರೀ ಕಡ್ಲೇರ ಹೊನ್ನಪ್ಪನವು ಉದ್ಘಾಟಿಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಯಣ ಕಜೆಗದ್ದೆವು ಉದ್ಘಾಟನಾ ಜಂಬರದ ಅಧ್ಯಕ್ಷತೆನ ವಹಿಸಿದೊ, ಶ್ರೀಮತಿ ಮಿಲನ ಕೆ ಭರತ್ ಮತ್ತೆ ಶ್ರೀ ಪೊನ್ನಚ್ಚನ ಗಣಪತಿಯವು ನೆಂಟ್ರಾಗಿ ಶಿಬಿರದ ಉದ್ಘಾಟನಾ ಜಂಬರಲಿ ಇದ್ದೊ. ಸಂಸ್ಕೃತಿ ಶಿಬಿರಲಿ ಶ್ರೀಮತಿ ಕಡ್ಯದ ಪಾರ್ವತಿ ಕೃಷ್ಣಪ್ಪವು ಸಂಪನ್ಮೂಲ ವ್ಯಕ್ತಿಯಾಗಿದ್ದೊ. ಏಪ್ರಿಲ್ 17ರಂದ್ ಅರೆಭಾಷೆ ಸಂಸ್ಕೃತಿ ಶಿಬಿರದ ಸಮರೋಪ ಸಮಾರಂಭ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ ಇವರ ಅಧ್ಯಕ್ಷತೆಲಿ ನಡ್‌ತ್. ಸಮಾರೋಪ ಜಂಬರಲಿ ಅರೆಭಾಷೆ ಗೌಡ ಸಮಾಜ, ಐಗೂರುನ ಅಧ್ಯಕ್ಷರಾದ ಶ್ರೀ ಕಡ್ಲೇರ ಹೊನ್ನಪ್ಪ ಮತ್ತೆ ಅರೆಭಾಷೆ ಗೌಡ ಸಮಾಜ, ಐಗೂರುನ ಮಾಜಿ ಅಧ್ಯಕ್ಷರಾದ ತೊತ್ತಿಯನ ಕೇಶವಯ್ಯವು ನೆಂಟರ್‌ಗಾಗಿದ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಸದಸ್ಯರ್‌ಗಾದ ಬೈತಡ್ಕ ಜಾನಕಿ ಬೆಳ್ಯಪ್ಪ ಮತ್ತೆ ಚೊಕ್ಕಾಡಿ ಪ್ರೇಮ ರಾಘವಯ್ಯನವು ಸಮಾರೋಪ ಜಂಭರಲಿ ಇದ್ದೊ.

2. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ವತಿಂದ ಏಪ್ರಿಲ್ 1ನೇ ತಾರೀಖ್‌ಂದ 7ನೇ ತಾರೀಖ್‌ವರೆಗೆ ಅರೆಬಾಸೆ ಜನಾಂಗಲಿ ಇರ್‌ವ ಸಂಸ್ಕೃತಿ, ಆಚರಣೆ ಮತ್ತೆ ಪರಿಸರದ ಚಿತ್ರಗಳ ಬಿಡ್ಸವ ಚಿತ್ರ ಕಲಾ ಶಿಬಿರನ ಅಯೋಜಿಸಿದೊ. ಅರೆಭಾಷೆ ಸಂಸ್ಕೃತಿ ಪ್ರಕೃತಿ ಚಿತ್ರಕಲಾ ಶಿಬಿರದ ಉದ್ಘಾಟನೆನ ಕೊಡಗು ಗೌಡ ಅರೆಭಾಷೆ ಸಾಂಸ್ಕೃತಿಕ ಅಕಾಡೆಮಿನ ಸ್ಥಾಪಕಾಧ್ಯಕ್ಷರಾದ ಶ್ರೀ ತುಂತಜೆ ಗಣೇಶ್‌ವು ಮಾಡ್ದೊ. ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆವು ಅರೆಭಾಷೆ ಸಂಸ್ಕೃತಿ ಪ್ರಕೃತಿ ಚಿತ್ರಕಲಾ ಶಿಬಿರದ ಉದ್ಘಾಟನಾ ಜಂಬರದ ಅಧ್ಯಕ್ಷತೆನ ವಹಿಸಿಕಂಡಿದೊ. ಚಿತ್ರಕಲಾ ಶಿಬಿರದ ಉದ್ಘಾಟನಾ ಜಂಬರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಸದಸ್ಯರ್‌ಗಾದ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಎ.ಪಿ.ಧನಂಜಯ

ಅಗೋಳಿಕಜೆ, ಕುಸುಮಾಧರ ಎ.ಟಿ, ಪುರುಷೋತಮ ಕಿರ್ಲಾಯ ಮತ್ತೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ರಿಜಿಸ್ಟ್ರಾರ್ ಚಿನ್ನಸ್ವಾಮಿಯವು ಇದ್ದೊ. ಈ ಶಿಬಿರಲಿ 10 ಜನ ಕಲಾವಿದರ್ ಅರೆಬಾಸೆ ಪ್ರದೇಶದ ಬೇರೆ ಬೇರೆ ಮನೆಗಳ್‌ಲಿ ಇದ್‌ದ್ಕಂಡ್ ಚಿತ್ರ ಬಿಡ್ಸಿದೊ. ಅರೆಭಾಷೆ ಸಂಸ್ಕೃತಿ ಪ್ರಕೃತಿ ಚಿತ್ರಕಲಾ ಶಿಬಿರದ ಸಮರೋಪ ಸಮಾರಂಭ ಏಪ್ರಿಲ್ 7ನೇ ತಾರೀಖ್‌ಂದ್ ಭಾರತೀಯ ವಿದ್ಯಾಭವನ, ಮಡಿಕೇರಿಲಿ ನಡ್ತ್. ಸಮರೋಪ ಸಮಾರಂಭಲಿ ಕೊಡಗು ಮಹಿಳಾ ಒಕ್ಕೂಟದ ಪೂರ್ವಾಧ್ಯಕ್ಷರಾದ ಶ್ರೀಮತಿ ಕೂಡಕಂಡಿ ಕಾವೇರಮ್ಮ ಸೋಮಣ್ಣ ಮತ್ತೆ ಮಡಿಕೇರಿ ತಾಲ್ಲೂಕು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿನ ಅಧ್ಯಕ್ಷರಾದ ಬೆಪ್ಪುರನ ಮೇದಪ್ಪವು ಮುಖ್ಯ ನೆಂಟ್ರ್‌ಗಾಗಿ ಬಂದಿದೊ. .ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆವು ಅರೆಭಾಷೆ ಸಂಸ್ಕೃತಿ ಪ್ರಕೃತಿ ಚಿತ್ರಕಲಾ ಶಿಬಿರದ ಸಮಾರೋಪ ಜಂಬರದ ಅಧ್ಯಕ್ಷತೆನ ವಹಿಸಿಕಂಡಿದೊ. ಚಿತ್ರಕಲಾ ಶಿಬಿರದ ಸಮರೋಪ ಜಂಬರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಸದಸ್ಯರ್‌ಗಾದ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಎ.ಪಿ.ಧನಂಜಯ ಅಗೋಳಿಕಜೆ, ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ, ಶ್ರೀಮತಿ ಸ್ಮಿತಾ ಅಮೃತರಾಜ್, ಡಾದಯಾನಂದ ಕೂಡಕಂಡಿ ಮತ್ತೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ರಿಜಿಸ್ಟ್ರಾರ್ ಚಿನ್ನಸ್ವಾಮಿಯವು ಇದ್ದೊ. ಈ ಶಿಬಿರಲಿ ಚಿತ್ರಕಲಾವಿದರ್ ಬಿಡ್‌ಸಿದ ಚಿತ್ರಗ ಎಲ್ಲರ ಮನಸ್‌ನ ಮುಟ್ಟುವಂಗೆ ಇತ್ತ್.

ರಾಜ್ಯದ ಬೇರೆ ಬೇರೆ ಕಡೆಂದ ಕಲಾವಿದರ್ ಬಂದ್ ಅರೆಭಾಷೆ ಮಾತಾಡ್‌ವರ ಮನೆಲಿದ್ದ್‌ಕಂಡ್ ಅವರ ಆಚಾರ ವಿಚಾರಗಳನ್ನ, ಸಂಸ್ಕೃತಿ, ಕೃಷಿ, ಜನ ಜೀವನ ಕ್ರಮನ ಬಾರಿ ಲಾಯ್ಕಲಿ ಚಿತ್ರಕಲಾ ರೂಪಲಿ ದಾಖಲಿಸ್ಯೊಳೊ. ಮೈಸೂರ್‌ನ ಗಂಗಾಧರ ಮೂರ್ತಿವು ಚೆಂಬು ಗ್ರಾಮದ ಅಕಾಡೆಮಿ ಸದಸ್ಯೆ ಸ್ಮಿತಾ ಅಮೃತರಾಜ್‌ರವ್ರ ಮನೆಲಿದ್ದ್ ಅಜ್ಜಿ ಕೂಸುನ ಮೀಸುವ ಚಿತ್ರನ ಕಣ್ಣಿಗೆ ಕಟ್ಟುವಂಗೆ ರಚಿಸ್ಯೊಳೊ. ರಾಜ್ಯದ ಹಿರಿಯ ಚಿತ್ರಕಲಾವಿದ ಕೆ.ವಿ.ಕಾಳೆಯವು ಅವಂದೂರು ಗ್ರಾಮದ ಹಿರಿಯ ಲೇಖಕ ಪಟ್ಟಡ ಪ್ರಭಾಕರ್‌ರವ್ರ ಮನೆಲಿದ್ದ್‌ಕಂಡ್ ಚಿತ್ರ ಬಿಡಿಸ್ಯೊಳೊ. ಮರಗೋಡ್ ಕಟ್ಟೆಮಾಡು ಗ್ರಾಮದ ತೊಟಂಬೈಲ್ ಪಾರ್ವತಿಯವ್ರ ಮನೆಲಿ ವಿಜಯಪುರದ ಕಲಾವಿದೆ ಮೀನಾಕ್ಷಿಯವು ಇದ್ದ್‌ಕಂಡ್ ಒಳ್ಳೆಮೆಣಸ್ ಕೃಷಿ ಮತ್ತೆ ಅರೆಭಾಷಿಗರ ಸಾಂಪ್ರದಾಯಿಕ ಮದುವೆನ ಎಣ್ಣೆ ಅರ್ಶಿಣ ಶಾಸ್ತ್ರದ ಚಿತ್ರನ ರಚಿಸ್ಯೊಳೊ. ಮಂಗಳೂರ್‌ನ ಅಜೇಶ್ ಮೇಕೆರಿ ಗ್ರಾಮದ ಪೂಜಾರೀರ ಸುಮನ್ ಅವ್ರ ಮನೆಲಿದ್ದ್‌ಕಂಡ್ ಕೋಳಿ ಕಟ್ಟದ ಚಿತ್ರನ ಬಿಡಿಸ್ಯೊಳೊ. ಕಾಲೂರು ಗ್ರಾಮದ

ಕುಕ್ಕೇರ ಲಕ್ಷ್ಮಣ್ ಅವರ ಮನೆಲಿ ಮಂಗಳೂರ್‌ನ ಪ್ರಥ್ವಿರಾಜ್ ಇದ್ದ್‌ಕಂಡ್ ಕಾಫಿ ಕೃಷಿ ಪದ್ದತಿನ ರಚಿಸಿದೊ. ಹಾಸನದ ಕಲಾವಿದ ಕೆ.ಎನ್.ಶಂಕರಪ್ಪವು ಡಾ ಕುಶ್ವಂತ್ ಕೋಳಿಬೈಲ್ ಅವರ ಮನೆಲಿದ್ದಕಂಡ್ ಚಿತ್ರ ರಚಿಸ್ಯೊಳೊ. ಹಾಂಗೆ ಮಂಗಳೂರ್‌ನ ಸೈಯದ್ ಅಸೀಫ್ ಆಲಿ, ವೀರಾಜಪೇಟೆನ ಬಿ.ಆರ್.ಸತೀಶ್, ಮಡಿಕೇರಿನ ಕೆ.ಆರ್.ಮಂಜುನಾಥ್, ಮರಗೋಡ್‌ನ ರೂಪೇಶ್ ನಾಣಯ್ಯ ಕೂಡ ಕೊಡಗಿನ ಅರೆಭಾಷಿಗರ ಸಂಸ್ಕೃತಿನ ಬಿಂಬಿಸುವ ಚಿತ್ರಗಳಿಗೆ ಜೀವ ತುಂಬ್ಯೊಳೊ. ಚಿತ್ರಕಲಾ ಶಿಬಿರಲಿ ಅರೆಭಾಷಿಗರ ಸಂಸ್ಕೃತಿನ ಪ್ರತೀಕವಾದ ಮದುಮಗಳ್‌ಗೆ ಎಣ್ಣೆ ಅರಶಿಣ ಹಚ್ಚುದು, ಹುತ್ತರಿ ಕೋಲಾಟ, ಜೋಗಿ ಕುಣ್‌ತ, ಭೂಮಿ ತಾಯಿನ ಪೂಜಿಸುವ ಕಿಡ್ಡಾಸ ಆಚರಣೆ, ತಲಕಾವೇರಿಗೆ ಸಾಂಪ್ರದಾಯಿಕ ಆಗಿ ಭಂಡಾರ ತಕಂಡ್ ಹೋದು, ಚನ್ನಮಣೆ ಆಟ, ಅಜ್ಜಿ ಪಿಳ್ಳಿನ ಮೀಸುದು, ಐನ್‌ಮನೆ, ಕೃಷಿ ಪದ್ದತಿ, ಗುಡ್ಡೆಮನೆ ಅಪ್ಪಯ್ಯ ಗೌಡರ ಚಿತ್ರ, ಓಂಕಾರೇಶ್ವರ ದೇವಸ್ಥಾನದ ಚಿತ್ರ, ಭಾಗಮಂಡಲ ಭಗಂಡೇಶ್ವರ ಗೋಪುರ, ತ್ರಿವೇಣಿ ಸಂಗಮ, ಹೊನ್ನಮ್ಮನ ಕೆರೆ ಮತ್ತೆ ದೇವಸ್ಥಾನ, ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನ, ರಾಜಾಸೀಟ್ ಹೀಂಗೆ ಹತ್ತ್ ಹಲವು ಚಿತ್ರಗ ಕಲಾವಿದರ ಕುಂಚಂದ ಅನಾವರಣ ಆತ್.

## ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ವಿಳಾಸ

**ಅಧ್ಯಕ್ಷರು**
**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**
ಕನಕಮಜಲು ಅಂಚೆ,
ಸುಳ್ಯ ತಾಲೂಕು, ದ.ಕ 574223
ಮೊ.ನಂ 9449082249,
kajegadde@gmail.com

**ಸದಸ್ಯರು**
**ಶ್ರೀಮತಿ ಜಾನಕಿ ಬೈತಡ್ಕ**
#21–16. ರೇಸ್‌ಕೋರ್ಸ್ ರಸ್ತೆ,
ಎಲ್‌ಐಸಿ ಹತ್ತಿರ, ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್**
'ಹಸಿರು'
ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ.ಜಾನ್ ಲೇಔಟ್,
ಶಕ್ತಿ ಕ್ವಾಟ್ರಸ್
ಮಡಿಕೇರಿ
ಮೊ.ನಂ 9900992360

**ಶ್ರೀ ಎ.ಪಿ. ಧನಂಜಯ ಅಗೋಳಿಕಜೆ**
2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ,
ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ**
ಮೇಘಸಂದ್ಯೆ ಎಸ್ಟೇಟ್,
ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ
ಮಡಿಕೇರಿ ತಾಲೂಕು
ಮೊ.ನಂ. : 9448141502

**ಡಾ. ದಯಾನಂದ ಕೂಡಕಂಡಿ**
ಬಿನ್. ಚಂದ್ರಹಾಸ ಕೆ.ಟಿ.
ತಾವೂರು ಗ್ರಾಮ, ಭಾಗಮಂಡಲ
ಮಡಿಕೇರಿ ತಾಲೂಕು
ಮೊ. ನಂ. : 9449766772
dayanandakudakandi@gmail.
com

**ಶ್ರೀ ಕುಸುಮಾಧರ ಎ.ಟಿ.**
ಬಿನ್. ತ್ಯಾಂಪಣ್ಣಗೌಡ
ಅಳಿಕೆ ಮಜಲು ಮನೆ
ಕಾಯರ್ತೋಡಿ, ಸುಳ್ಯ
ಮೊ. ನಂ. : 7090133686

**ಡಾ. ವಿಶ್ವನಾಥ ಬದಿಕಾನ**
ಬಿನ್. ಹೂವಪ್ಪಗೌಡ ಬದಿಕಾನ
ನಂ. 9–88/9,
ಪ್ಲಾಟ್ ನಂ.. 407(34)
ಧ್ರುವ ರೆಸಿಡೆನ್ಸಿ, ಎಕ್ಕೂರು,
ಕಂಕನಾಡಿ –575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿನೆಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ–574 230
ಮೊ. ನಂ. : 9480293464
7406141591

**ಶ್ರೀ ಪುರುಷೋತ್ತಮ ಕಿರ್ಲಾಯ**
ಬಿನ್. ದೇವಣ್ಣ ಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ,
ಕಾವೂರು,
ಮಂಗಳೂರು, ದ.ಕ–575015.
ಮೊಬೈಲ್ : 9448216070

**ಶ್ರೀ ಭರತೇಶ ಅಲಸಂಡೆಮಜಲು**
ಅಲಸಂಡೆಮಜಲು ಮನೆ
ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು
ದಕ್ಷಿಣ ಕನ್ನಡ–574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ**
ಬಿನ್. ಕೇಶವ ಕೆ.ಎ. ಕುಂಬಳಚೇರಿ
ಮನೆಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಸಹಾಯಕ ನಿರ್ದೇಶಕರು
ವಾರ್ತಾ ಇಲಾಖೆ
ವಾರ್ತಾ ಭವನ, ಕೊಡಗು ಜಿಲ್ಲೆ
ಮಡಿಕೇರಿ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ. ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ ಚೆಂಬು
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವ ಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18 ಬದುಕು : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್. ತೇಜಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ. ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ
26 ಅಪೂರ್ವ ಸಂಗಮ : ಕಟ್ರತನ ಲಲಿತಾ ಅಯ್ಯಣ್ಣ
27 ಪುಂಸ್ತ್ರೀ (ಅರೆಭಾಷೆಗೆ ತರ್ಜುಮೆ) : ಎಂ.ಜಿ. ಕಾವೇರಮ್ಮ
28 ಕಲ್ಯಾಣಸ್ವಾಮಿ (ಅರೆಭಾಷೆಗೆ ತರ್ಜುಮೆ) : ಸಂಗೀತ ರವಿರಾಜ್

HINGARA AREBHASHE QUARTERLY VOLUME-4, ISSUE-6
DATE : 30-06-2021 KODAGU KARARB/2016/69571 PRICE : RS. 20/- PAGES : 80



ಐಗೂರುಲಿ ನಡ್ದ ಸಂಸ್ಕೃತಿ ಶಿಬಿರದ ಶಿಬಿರಾರ್ಥಿಗ




ಐಗೂರು ಸಂಸ್ಕೃತಿ ಶಿಬಿರದ ಸಮಾರೋಪ ಜಂಬರ




ಚಿತ್ರಕಲಾ ಶಿಬಿರದ ಉದ್ಘಾಟನೆ



ಚಿತ್ರಕಲಾ ಶಿಬಿರದ ಶಿಬಿರಾರ್ಥಿಗ

Printed by Chinnaswamy on behalf of Registrar, Karnataka Arebhase Samskruthi Mathu Sahitya Academy and Published by Chinnaswamy on behalf of Karnataka Arebhase Samskruthi Mathu Sahitya Academy (name of owner) and Printed at Aakrithi Prints, Light House Hill Road, Mangaluru and Published at Karnataka Arebhase Samskruthi Mathu Sahitya Academy, Coffee Krupa Building, Ist Floor, Raja Seat Road, Madikeri, Kodagu District. Editor : Dr. Dayananda Kudakandi